

# ಕನ್ನಡ ವಿಶ್ವವಿದ್ಯಾಲಯ, ಹಂಪಿ

2009–10ನೇ ಸಾಲಿನ ಎಂ.ಫಿಲ್ ಪದವಿ ಪರೀಕ್ಷೆಗೆ ಸಂಬಂದಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ.

## "ವೈದೇಹಿಯವರ ಕಥೆಗಳಲ್ಲಿ ಪ್ರಾದೇಶಿಕತೆ"

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ.

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ



# ಕನ್ನಡ ವಿಶ್ವವಿದ್ಯಾಲಯ, ಹಂಪಿ



2009–10ನೇ ಸಾಲಿನ ಎಂ.ಫಿಲ್ ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ.

## "ವೈದೇಹಿಯವರ ಕಥೆಗಳಲ್ಲಿ ಪ್ರಾದೇಶಿಕತೆ"

ಮಾರ್ಗದರ್ಶಕರು

ವತ್ಸಲ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ.

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

# ವೈದೇಹಿಯವರ ಕಥೆಗಳಲ್ಲಿ ಪ್ರಾದೇಶಿಕತೆ

## ಪರಿವಿಡಿ

# ಪ್ರಸ್ತಾವನೆ

ಭಾರತೀಯ ಸಂಸ್ಕೃತಿಯಲ್ಲಿ ಕಥಾಸಾಹಿತ್ಯ ಬಹಳ ಕಾಲದಿಂದ ನಡೆದುಕೊಂಡು ಬಂದಿದೆ. ಅಭಿಜಾತ ಮತ್ತು ಜಾನಪದ ಎರಡೂ ಪರಂಪರೆಗಳಲ್ಲಿ ಕಥನಕ್ಕೆ ವಿಶೇಷ ಪ್ರಾಮುಖ್ಯವಿದೆ. ಒಂದಲ್ಲ ಒಂದು ರೀತಿಯಲ್ಲಿ ಕಥೆ ಹೇಳುವ ಸಂಪ್ರದಾಯ ಮತ್ತು ಕಥೆಯನ್ನು ಕೇಳುವ ಅಭ್ಯಾಸ ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬಿಟ್ಟಿದೆ. ಹೀಗಾಗಿ ಕಥೆ ಪುರಾಣದ್ದಾಗಿರಲಿ, ಇತಿಹಾಸದ್ದಾಗಿರಲಿ, ಸಮಕಾಲೀನವಾಗಿರಲಿ, ಇಲ್ಲವೆ ಪೂರ್ಣ ಕಾಲ್ಪನಿಕವಾಗಿರಲಿ ಅದು ಒಟ್ಟಿನಲ್ಲಿ ನಿರೂಪಕ ಮತ್ತು ಕೇಳುಗನ ನಡುವಣ ಕೊಂಡಿಯಾಗಿರುತ್ತದೆ.

ಸಣ್ಣಕಥೆ ಎಂಬ ಪರಿಭಾಷೆ ಕನ್ನಡದಲ್ಲಿ ಹುಟ್ಟಿಕೊಂಡದ್ದು ಇಂಗ್ಲೀಷ್ ಸಾಹಿತ್ಯ ವಿಮರ್ಶೆಯ ಪರಿಚಯದಿಂದ. ಆದರೆ ಅದಕ್ಕೂ ಮೊದಲು ಸಣ್ಣಕಥಾ ಸ್ವರೂಪದ ಲಕ್ಷಣಗಳನ್ನು ಅನಾದಿಕಾಲದಿಂದಲೂ ಕಾಣಬಹುದಾಗಿದೆ. ಎಡ್ಗರ್ ಅಲೆನ್ ಪೊ ಎಂಬಾತ ಸಣ್ಣಕಥೆಯ ಸ್ವರೂಪವನ್ನು ವಿವರಿಸಲು ಪ್ರಯತ್ನಿಸಿದ. ಅವನ ಪ್ರಕಾರ ಸಣ್ಣಕಥೆ 'ಓದಲು ಅರ್ಧಗಂಟೆ, ಒಂದು ಅಥವಾ ಎರಡು ಗಂಟೆಗಳ ಕಾಲ ತೆಗೆದುಕೊಳ್ಳುವ ಸಂಕ್ಷಿಪ್ತವಾದ ಗದ್ಯನಿರೂಪಣೆ'. ಸಣ್ಣಕಥೆಯ ವ್ಯಾಪ್ತಿಯನ್ನು ಈ ರೀತಿ ಗಮನಿಸುವುದಾದರೆ ಈ ಬಗೆಯ ರಚನೆಗಳು, ಬರವಣಿಗೆಯ ಕಲೆ ಮನುಷ್ಯನಿಗೆ ಪರಿಚಯವಾಗುವುದಕ್ಕಿಂತ ಸಾವಿರಾರು ವರ್ಷಗಳಷ್ಟು ಹಿಂದಿನಿಂದಲೆ ಅಸ್ಥಿತ್ವದಲ್ಲಿದ್ದವೆಂದು ಹೇಳಬೇಕಾಗುತ್ತದೆ. ನಮಗೆ ದೊರೆತಿರುವ ಅತಿ ಪ್ರಾಚೀನ ಸಣ್ಣಕಥೆ, ಬಹುಶಃ ಕ್ರಿ.ಪೂ. 3200 ರ ಸುಮಾರಿನದು. ಈಜಿಪ್ಟ್ ಭಾಷೆಯ 'ದಿ ಟೂ ಬ್ರದರ್ಸ್' ಎಂಬುದು.

ಕನ್ನಡದಲ್ಲಿ ಸಮೃದ್ಧಿಯಾಗಿ ಸಣ್ಣಕಥೆಗಳು ಸೃಷ್ಟಿಯಾಗತೊಡಗಿದ್ದು ನವೋದಯ ಕಾಲದಲ್ಲಿ. ಪಂಜೆಮಂಗೇಶರಾಯರ 'ನನ್ನ ಚಿಕ್ಕತಾಯಿ' 'ನನ್ನ ಚಿಕ್ಕ ತಂದೆ' ಎನ್ನುವ ಕಥೆಗಳನ್ನು ಕನ್ನಡದ ಮೊದಲ ಕಥೆಗಳೆಂದು ಗುರುತಿಸಿದರೂ, ಪ್ರಮುಖವಾಗಿ ಕಥಾಸಾಹಿತ್ಯಕ್ಕೆ ಪ್ರೌಢಿಮೆಯನ್ನು ದೊರಕಿಸಿಕೊಟ್ಟವರೆಂದರೆ ಮಾಸ್ತಿ ವೆಂಕಟೇಶ್ ಅಯ್ಯಾಂಗಾರ್, ಹಾಗೆಯೆ ನಂತರದ ದಿನಗಳಲ್ಲಿ ಕಥಾಸಾಹಿತ್ಯವನ್ನು ಯಶಸ್ವಿಯಾಗಿ ಮುಂದುವರೆಸಿದ ಲೇಖಕಿಯರಲ್ಲಿ ವೈದೇಹಿಯವರು ಪ್ರಮುಖರಾಗಿದ್ದಾರೆ.

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿ ಬಹುಹಿಂದಿನಿಂದಲೂ 'ಕಥನ' ಕ್ರಿಯೆಯು ಒಂದು ಬಹುಮುಖ್ಯ ತಂತ್ರವಾಗಿ, ವಿನ್ಯಾಸವಾಗಿ ಕೆಲಸಮಾಡಿದೆ. ಅದರಲ್ಲೂ ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ನವೋದಯ ಕಾಲವನ್ನು ಕನ್ನಡ ಸಾಹಿತ್ಯದ ಸುವರ್ಣಯುಗ ಎಂದು ಕರೆದರೆ ತಪ್ಪಾಗಲಾರದು. ಏಕೆಂದರೆ ಸಾಹಿತ್ಯದ ವಿವಿಧ ಪ್ರಕಾರಗಳು ಮೈದುಂಬಿ ತನ್ನ ಪ್ರತಿಷ್ಠೆಯ ಪರಾಕಷ್ಟೆಯನ್ನು ಮುಟ್ಟಿದ್ದು ನವೋದಯದ ಸಂದರ್ಭದಲ್ಲಿ. ಪ್ರಾಚೀನ ಸಾಹಿತ್ಯದಲ್ಲಿ ಕಾವ್ಯರೂಪಕ್ಕೆ ಮಾತ್ರ ಒತ್ತನ್ನು ನೀಡಲಾಗಿತ್ತು. ಅಷ್ಟೆ ಅಲ್ಲದೆ ಕಾವ್ಯರೂಪವು ಸಾಮಾನ್ಯ ಜನರ ಕೈಗೆ ಎಟುಕುವ ಸಾಹಿತ್ಯವು ಆಗಿರಲಿಲ್ಲ. ಕೇವಲ ಪಂಡಿತರಿಗೆ ಮಾತ್ರ ಅದು ಸೀಮಿತವಾಗಿತ್ತು. ಇಂತಹ ಒಂದು ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಗೊಳಗಾದ ನವೋದಯದ ಸಾಹಿತಿಗಳು ಹಳೆಯ ಪರಂಪರೆಯನ್ನು ಅರ್ಥಮಾಡಿಕೊಳ್ಳುತ್ತಾ ಹೊಸ ಸಾಹಿತ್ಯ ರೂಪಗಳಿಗೆ ದಾರಿಮಾಡಿಕೊಟ್ಟರು. ಈ ನಿಟ್ಟಿನಲ್ಲಿ ಕವಿತೆ, ನಾಟಕ, ಕಾದಂಬರಿ, ಸಣ್ಣಕಥೆ, ಜೀವನ ಚರಿತ್ರೆ, ಆತ್ಮಚರಿತ್ರೆ, ನೀಳ್ಗತೆಗಳು, ಪ್ರಬಂಧ ಹೀಗೆ ಹತ್ತು ಹಲವು ಸಾಹಿತ್ಯ ಪ್ರಕಾರಗಳು ಬೆಳಕಿಗೆ ಬಂದವು.

ವೈದೇಹಿಯವರು ನಮ್ಮ ಸಂಸ್ಕೃತಿ ಮತ್ತು ಜೀವನ ಮೌಲ್ಯಗಳ ಬಗ್ಗೆ ಅಪಾರ ಗೌರವ, ಅಗಾಧ ಶ್ರದ್ಧೆ, ನಂಬಿಕೆ ಇಟ್ಟುಕೊಂಡಿರುವುದಲ್ಲದೆ ಅದನ್ನು ತಮ್ಮ ಬರವಣಿಗೆಯಲ್ಲೂ ತೋರಿಸಿದ್ದಾರೆ. ವೈದೇಹಿಯವರು ತಮ್ಮ ಬರವಣಿಗೆಯನ್ನು ಆರಂಭಿಸಿದ್ದು ಪತ್ರಿಕೆಗಳಿಗೆ ಕಥೆ ಕಳುಹಿಸುವ ಮೂಲಕ. ಸುಧಾ ವಾರಪತ್ರಿಕೆ ಜಾನಕಿ ಶ್ರೀನಿವಾಸಮೂರ್ತಿ ಎಂಬ ಹೆಸರನ್ನೇ ಬದಲಾಯಿಸಿ 'ವೈದೇಹಿ' ಎಂಬ ಕಾವ್ಯನಾಮ ನೀಡಿ ನಂತರ ವೈದೇಹಿ ಎಂಬ ಹೆಸರಿನಿಂದಲೇ ಕಥೆಗಳನ್ನು ಪ್ರಕಟಿಸಿತು. ಮುಂದೆ ಅಕ್ಷರ ಪ್ರಕಾಶನವೇ ಅವರ ಬಹುತೇಕ ಕೃತಿಗಳನ್ನು ಪ್ರಕಟಿಸಿತು, ಬರೆಸಿತೂ ಕೂಡ. ಅವರೇ ಹೇಳುವಂತೆ "ನೀನಾಸಮ್ ಚಿತ್ರರಸಗ್ರಹಣ ಶಿಬಿರ ಮತ್ತು ವಿವಿಧ ಅಧ್ಯಯನ, ಚಿಂತನ ಶಿಬಿರಗಳಿಂದ ನನ್ನೊಳಗೇ ಒಳಗೇ ಕುಟುಕುತ್ತಿದ್ದ ಮನೆಯೊಳಗಿದ್ದೇನೆ ವಿಸ್ತಾರ ಜಗದೊಳಗಿಲ್ಲ ಎಂಬ ಕಲ್ಪನೆ ತೆಳುವಾಗಿ, ನನ್ನ ಬದುಕು ಯಥಾಸ್ಥಿತಿಮಿತಿಯಲ್ಲಿಯೇ ವಿಸ್ತರಣಗೊಂಡಿತು" ಎಂದು ತನ್ನ ಬರವಣಿಗೆಗೆ ಸ್ಫೂರ್ತಿಯಾದ ಅಕ್ಷರ ಪ್ರಕಾಶನವನ್ನೂ, ಸುಬ್ಬಣ್ಣನನ್ನು ನೆನೆಯುತ್ತಾರೆ. ಲಂಕೇಶ್ ಪತ್ರಿಕೆಯ ಲಂಕೇಶರವರು ಅವರ ಪತ್ರಿಕೆಯಲ್ಲಿ ಇವರ ಕಥೆಗಳನ್ನು ಪ್ರಕಟಿಸುತ್ತಾ ಇವರಿಗೆ ಸ್ಫೂರ್ತಿ ನೀಡಿದರು. ಶ್ರೀ ಲಂಕೇಶ್ ಅವರ ಪ್ರೀತಿ, ಅಭಿಮಾನಗಳು ವೈದೇಹಿಯವರಿಗೆ ಬರವಣಿಗೆಗೆ ಸ್ಫೂರ್ತಿ ನೀಡಿ ಹುರಿದುಂಬಿಸಿತು. ಹೀಗೆ ಬರವಣಿಗೆಯನ್ನು ಮುಂದುವರೆಸುತ್ತಾ ಹೋದಂತೆ ಅವರು ತಮಗೆ ತಿಳಿಯದಂತೆ ಪ್ರೀತಿಯ ನೋವಿನ ಸೃಜನಶೀಲ

ಕ್ರಿಯೆಯಾಯ್ತು. ಇವರ ಬರವಣಿಗೆಗೆ ಸ್ಫೂರ್ತಿಯಾದ ಎಲ್ಲಾ ಉಪಾಧ್ಯಾಯರು, ಮನೆಯವರು, ನೆಂಟರು, ಪತ್ರಿಕೆಗಳು, ಮನೆಯ ಸಾಕುಪ್ರಾಣಿಗಳು ಅಲ್ಲಿಯ ಪರಿಸರವನ್ನು ಸ್ಮರಿಸಿ ಕೃತಜ್ಞತೆಯನ್ನು ಸಲ್ಲಿಸುತ್ತಾರೆ.

ವೈದೇಹಿಯವರು ಸಮಕಾಲೀನ ಭಾರತೀಯ ಲೇಖಕಿಯರಲ್ಲೇ ತುಂಬ ವಿಶಿಷ್ಟರೆಂದೂ, ಮಹತ್ವದವರೆಂದು ಮನ್ನಣೆ ಪಡೆದಿದ್ದಾರೆ. 1979ರಲ್ಲಿ ತಮ್ಮ ಮೊದಲ ಕಥಾಸಂಕಲನವನ್ನು ಪ್ರಕಟಿಸಿದ ಇವರು ಕಳೆದ ಮೂರು ದಶಕಗಳಲ್ಲಿ ಬೆಳೆದಿರುವ ಪರಿ ಒಂದು ಸಂತಸಭರಿತ ಅಚ್ಚರಿ. ಈ ಅವಧಿಯಲ್ಲಿ ಅವರ ಕಥನಕೌಶಲವು ಹೊಸ ಎತ್ತರಗಳಿಗೆ ಏರಿರುವಂತೆ ಅವರ ಲೋಕಗ್ರಹಿಕೆ ಮತ್ತು ಲೋಕದೃಷ್ಟಿಗಳೂ ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತ, ಪ್ರಬುದ್ಧವಾಗುತ್ತಾ ಬಂದಿವೆ. ಅಷ್ಟೇ ಅಲ್ಲ, ಈ ಅವಧಿಯಲ್ಲಿ ಅವರ ಸಾಹಿತ್ಯವು ಸಾಧಿಸಿಕೊಂಡಿರುವ ಪ್ರಕಾರ ವೈವಿಧ್ಯವೂ ಗಮನಾರ್ಹವಾಗಿದೆ. ಸಣ್ಣ ಕಥೆಯಿಂದ ಆರಂಭವಾಗಿ ಕಾವ್ಯ, ಕಾದಂಬರಿ, ಪ್ರಬಂಧ, ನಾಟಕದಂತಹ ವಿವಿಧ ಪ್ರಕಾರಗಳಲ್ಲಿ ವಿಸ್ತರಿಸಿಕೊಂಡಿರುವ ಅವರ ಪ್ರಯೋಗಶೀಲತೆ ಮತ್ತು ಸಾಧನೆ ಎದ್ದುಕಾಣುವಂತಹದ್ದು.

ಒಂದು ತುಂಬ ಸಂಪ್ರದಾಯಸ್ಥ ಕುಟುಂಬವೊಂದರಲ್ಲಿ ಹುಟ್ಟಿ ಸುತ್ತಮುತ್ತಲ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತ ತಮ್ಮ ಬರವಣಿಗೆಗೆ ಬೇಕಾದ ಮೂಲಜೀವದ್ರವ್ಯವನ್ನು ವೈದೇಹಿ ಪಡೆದ ಬಗೆಯೇ ಒಂದು ರೋಚಕ ಕಥನವಾಗಿದೆ. ವೈದೇಹಿಯವರ ಹೆಚ್ಚಿನ ಬರವಣಿಗೆಯು ಒಂದು ಸಮುದಾಯದಲ್ಲಿ, ಸಂಸ್ಕೃತಿಯಲ್ಲಿ ಆಳವಾಗಿ ಬೇರುಬಿಟ್ಟಿರುವಂಥದ್ದು. ಅವರ ಕೆಲವು ಕಥೆಗಳಲ್ಲಿ ಭಾವ-ಭಾಷೆ-ವ್ಯಕ್ತಿತ್ವಗಳು ಬೆರೆತು ಹೋಗಿವೆ. ಅಧಿಕೃತ ಸಾಂಸ್ಕೃತಿಕ ಚಹರೆ, ಭಾಷಾಪ್ರಯೋಗಗಳಲ್ಲಿನ ವೈವಿಧ್ಯ ಮತ್ತು ಆಯಾ ಕಥೆಗೆ ಅನುಗುಣವಾದ ನಿರೂಪಣಾ ತಂತ್ರಗಳಿಂದಾಗಿ ವೈದೇಹಿ ಕಥೆಗಳು ಒಮ್ಮೆ ಓದಿದೊಡನೆ ಓದುಗರ ಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯನ್ನು ಟಂಕಿಸಿ ಬಿಡುತ್ತವೆ. ಅಷ್ಟೊಂದು ಸ್ಥಳೀಯವಾಗಿದ್ದು ಹೆಣ್ಣಿನ ಸ್ಥಿತಿ-ಸಾಧ್ಯತೆ, ಸಾಮಾಜಿಕ-ಸಾಂಸ್ಕೃತಿಕ ಪಲ್ಲಟ ಮತ್ತು ಬದುಕಿನ ಮೌಲ್ಯಗಳನ್ನು ಕುರಿತ ಜಿಜ್ಞಾಸೆಗಳು ಅಸಾಧಾರಣವಾದುದಾಗಿದೆ. ಆಪ್ತವಾಗಿ ಸಂವಾದಿಸುತ್ತಲೇ ಜೀವನದ ಸಂಕೀರ್ಣ ಆಳಗಳನ್ನು ಸ್ಪರ್ಶಿಸಿ ಬಿಡುವಲ್ಲಿ ಅವರ ಬರಹಗಳ ಯಶಸ್ಸಿದೆ.

ವೈದೇಹಿಯವರು ಕನ್ನಡದ ಪ್ರಮುಖ ಲೇಖಕಿಯಾದರು ಅವರ ಕುರಿತ ಹೆಚ್ಚಿನ ವಿಮರ್ಶಾಕೃತಿಗಳು ಹೊರಬಂದಿಲ್ಲ. ಇವರ ಬರಹಗಳು ಓದುಗನಿಗೆ ಹೊಸಲೋಕವನ್ನೇ ಸೃಷ್ಟಿಸುತ್ತವೆ. ಸಮಾಜದ ವಿವಿಧ ಸ್ಥರದ ಜನರ ಮನೋಭಿಲಾಶೆಯನ್ನು, ಮನಸ್ಥಿತಿಯನ್ನು ತಿಳಿಸುತ್ತದೆ.

ವೈದೇಹಿಯವರು ತಮ್ಮ ಕತೆಗಳ ಮೂಲಕ ಕರಾವಳಿ ಜನರ ಆಚಾರ-ವಿಚಾರ, ಸಂಪ್ರದಾಯ, ಆಹಾರಕ್ರಮ, ಕೃಷಿ, ಕಲೆ, ಭಾಷೆ ಮೊದಲಾದ ವೈಶಿಷ್ಟ್ಯಗಳನ್ನು ತಿಳಿಸುತ್ತಾರೆ.

ವೈದೇಹಿಯವರು ತಮ್ಮ ಕಥಾನಿರೂಪಣೆಗೆ ಎಲ್ಲರಿಗೂ ಅರ್ಥವಾಗುವಂತಹ ಸರಳ ಭಾಷೆಯನ್ನು ಬಳಸಿದ್ದಾರೆ. ಅದಾಗ್ಯೂ ಕೆಲವು ಕಥೆಗಳಲ್ಲಿ ಕುಂದಾಪುರ ಶೈಲಿಯ ಕನ್ನಡವನ್ನು ಬಳಸಿದ್ದಾರೆ. ಉದಾಹರಣೆಗೆ 'ಅಕ್ಕು', 'ಅಮ್ಮಚ್ಚಿಯೆಂಬ ನೆನಪು' ಅಲ್ಲಿಯ ವೈಶಿಷ್ಟ್ಯತೆಯನ್ನು ಬಹಳ ಅರ್ಥಗರ್ಭಿತವಾಗಿ ವಿವರಿಸುವಾಗ ಅದು ಅತ್ಯಂತ ಅವಶ್ಯವೂ ಕೂಡ ಆಗಿದೆ.

ಇವರು ತಮ್ಮ ಕಥೆಗಳಲ್ಲಿ ಹೆಣ್ಣಿನ ಸಂವೇದನೆಗಳನ್ನು ತುಂಬಾ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಇವರ ಅಂತರಂಗದ ನೂರು ಭಾವನೆಗಳು ನೂರು ರೀತಿಯಲ್ಲಿ ಚೆಲ್ಲಿಕೊಳ್ಳುತ್ತವೆ. ಹೆಣ್ಣು ಇವರ ಎಲ್ಲಾ ಕಥೆಗಳಲ್ಲಿ ಒಂದೇ ರೀತಿ ಚಿತ್ರಿತವಾಗುವುದಿಲ್ಲ. ಹೆಣ್ಣು ಕೇವಲ ಕಣ್ಣೀರು ಸುರಿಸುವ ಅಸಹಾಯಕಳಲ್ಲ. ಆಕೆ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡು ಹೋಗುವಂತಹ ಧೈರ್ಯವಂತೆ ಎಂಬುದನ್ನು ಲೇಖಕಿ ಚಿತ್ರಿಸಿದ್ದಾರೆ. ಹೀಗೆ ಲೇಖಕಿ ಈ ಕಥಾನಿರೂಪಣೆಯ ಜೊತೆಗೆ ಅವರಿಗೆ ಪ್ರೇರಣೆಯಾದ ಕರಾವಳಿಯ ಪರಿಸರ, ಆಚಾರ-ವಿಚಾರ, ಸಂಪ್ರದಾಯ, ನಂಬಿಕೆ, ಭಾಷೆ ಇವೆಲ್ಲವನ್ನ ತಿಳಿಸುತ್ತಾ ಅಲ್ಲಿಯ ಸಂಪೂರ್ಣ ಪ್ರಾದೇಶಿಕತೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

ನಾನು ವೈದೇಹಿಯವರ ಬರವಣಿಗೆಯ ಕುರಿತು ಆಕರ್ಷಿತನಾಗಿದ್ದು ಅವರ ಒಂದು ಭಾಷಣವನ್ನು ಕೇಳಿಯೇ ಎಂದು ಹೇಳಬಹುದು. ನಾನು ಪದವಿಯಲ್ಲಿ ಓದುತ್ತಿದ್ದಾಗ ಮಾನವಿಕ ವಿಜ್ಞಾನದ ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಆ ಸಮಯದಲ್ಲಿ ಅವರು ಮಾಡಿದ ಭಾಷಣ ನನ್ನನ್ನು ಬಹುವಾಗಿ ಆಕರ್ಷಿಸಿತು. ಸಮಾಜದ ವಿವಿಧ ಮಜಲುಗಳನ್ನು ಕುರಿತು ತಿಳಿಸುವ ಅವರ ಬರವಣಿಗೆಯನ್ನು ಕುರಿತು ಇಂದು ಅಧ್ಯಯನ ಮಾಡುವುದು ನನಗೆ ಅತೀವ ಸಂತೋಷವನ್ನು ನೀಡಿದೆ.

## ವೈದೇಹಿಯವರ ಬರಹಗಳ ಪ್ರಕಾರಗಳು

ಕನ್ನಡದ ಪ್ರಮುಖ ಲೇಖಕಿಯಾದ ಇವರು ತಮ್ಮ ಮೊದಲ ಕಥಾಸಂಕಲನವನ್ನು ಪ್ರಕಟಿಸಿದ್ದು 1979 ರಲ್ಲಿ. ಆ ನಂತರ ಅವರು ತಮ್ಮನ್ನು ಸಂಪೂರ್ಣ ಬರಹಗಳಲ್ಲಿ ತೊಡಗಿಸಿಕೊಂಡರು. 1979ರಿಂದ ಇಲ್ಲಿಯವರೆಗೆ ಅವರ ಕಥನ ಕೌಶಲವು ಹೊಸ ಎತ್ತರಗಳಿಗೆ ಏರಿರುವಂತೆ ಅವರ ಲೋಕಗ್ರಹಿಕೆ ಮತ್ತು ಲೋಕದೃಷ್ಟಿಗಳೂ ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತ ಬಂದಿವೆ. ಅಷ್ಟೇ ಅಲ್ಲ. ಈ ಅವಧಿಯಲ್ಲಿ ಅವರ ಸಾಹಿತ್ಯವು ಸಾಧಿಸಿಕೊಂಡಿರುವ ಪ್ರಕಾರ ವೈವಿಧ್ಯವೂ ಗಮನಾರ್ಹವಾಗಿದೆ. ಸಣ್ಣ ಕಥೆಯಿಂದ ಆರಂಭವಾಗಿ ಕಾವ್ಯ, ಕಾದಂಬರಿ, ಪ್ರಬಂಧ, ನಾಟಕದಂತಹ ವಿವಿಧ ಪ್ರಕಾರಗಳಲ್ಲಿ ವಿಸ್ತರಿಸಿಕೊಂಡಿರುವ ಅವರ ಪ್ರಯೋಗಶೀಲತೆ ಮತ್ತು ಸಾಧನೆ ಎದ್ದು ಕಾಣುವಂತಿದೆ. ಲೇಖಕಿ ಬರೆದ ಕಥಾಸಂಕಲನಗಳಾವೆಂದರೆ 'ಮರ ಗಿಡ ಬಳ್ಳಿ', 'ಅಂತರಂಗದ ಪುಟಗಳು', 'ಗೋಲ', 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು', 'ಅಮ್ಮಚ್ಚಿ ಎಂಬ ನೆನಪು', 'ಕ್ರೌಂಚ ಪಕ್ಷಿಗಳು' ಹಾಗೂ 'ಅಲೆಗಳಲ್ಲಿ ಅಂತರಂಗ' ಎಂಬ ಇಲ್ಲಿಯವರೆಗಿನ ಕಥೆಗಳ ಸಂಗ್ರಹ.

ಲೇಖಕಿ 'ಬಿಂದು ಬಿಂದಿಗೆ' ಮತ್ತು 'ಪಾರಿಜಾತ' ಎಂಬ ಕವನಸಂಕಲನಗಳನ್ನು ಬರೆದಿದ್ದಾರೆ. 'ಅಸ್ಪೃಶ್ಯರು' ಎಂಬ ಕಾದಂಬರಿಯನ್ನು ಬರೆದಿದ್ದಾರೆ. ಇವರು ಬರೆದ ಪ್ರಮುಖ ಪ್ರಬಂಧ ಸಂಕಲನಗಳಾವೆಂದರೆ 'ಮಲ್ಲಿನಾಥನ ಧ್ಯಾನ', 'ಜಾತ್ರೆ', ವೈದೇಹಿಯವರು ಬರೆದ ನಾಟಕಗಳಾವೆಂದರೆ 'ಐದು ಮಕ್ಕಳ ನಾಟಕಗಳು' 'ಮೂರು ಮಕ್ಕಳ ನಾಟಕಗಳು', 'ಎರಡು ಮಕ್ಕಳ ನಾಟಕಗಳು', 'ಸೋಮಾರಿ ಓಲ್ಯ' ಹಾಗೂ 'ಮಕ್ಕಳ ಎರಡು ನಾಟಕಗಳು'.

ವೈದೇಹಿಯವರ ಸಾಧನೆ ಇತರ ಕ್ಷೇತ್ರಗಳಲ್ಲಿಯು ಅನನ್ಯವಾದುದಾಗಿದೆ. ಇವರ ಇತರ ಆಸಕ್ತಿಗಳೆಂದರೆ ಅನುವಾದ ಮತ್ತು ಪುನರ್ ನಿರೂಪಣೆ. ಭಾಸ್ಕರ ಚಂದಾವರ್‌ಕರ್ ಅವರು ಸಂಗೀತದ ರಸಗ್ರಹಣ ಶಿಬಿರವೊಂದರಲ್ಲಿ ಇಂಗ್ಲೀಷ್ ಭಾಷೆಯಲ್ಲಿ ನೀಡಿದ ಉಪನ್ಯಾಸಗಳನ್ನು ಟೇಪುಮಾಡಿಕೊಂಡು ಅವುಗಳನ್ನು ಲಿಪಿಗೆ ಪರಿವರ್ತಿಸಿ, ಕನ್ನಡಕ್ಕೆ ಅನುವಾದಿಸಿ ಸಂಪಾದಿಸಿ "ಸಂಗೀತ ಸಂವಾದ" ಎಂಬ ಇನ್ನೂರು ಪುಟಗಳ ಅಪೂರ್ವ ಗ್ರಂಥವನ್ನು ವೈದೇಹಿ ಪ್ರಕಟಿಸಿದರು. ಅಂಥದೊಂದು ಪುಸ್ತಕ ಭಾರತದ ಇನ್ನಾವುದೇ ಭಾಷೆಯಲ್ಲಿ ಇಲ್ಲವಂತೆ. ಹಾಗೆಯೇ ಕೋಟ ಲಕ್ಷ್ಮಿನಾರಾಯಣ ಕಾರಂತ, ಸೇಡಿಯಾಪು ಕೃಷ್ಣಭಟ್ಟ, ಬಿ.ವಿ.ಕಾರಂತ, ಸರಸ್ವತಿ ಬಾಯಿ ರಾಜವಾಡೆ ಮುಂತಾದ ಗಣ್ಯರ ಆತ್ಮಚರಿತ್ರೆ, ಅನುಭವಕಥನಗಳನ್ನು ಅವರ

ಬಳಿ ಕೂತು ಸ್ವತಃ ಕೇಳಿ, ಧ್ವನಿಮುದ್ರಿಸಿಕೊಂಡು ಆನಂತರ ಅವುಗಳಿಗೆ ಬರಹದ ರೂಪಕೊಟ್ಟು ಅನನ್ಯವೆನಿಸುವಂತಹ ಪುಸ್ತಕಗಳನ್ನು ವೈದೇಹಿ ಹೊರತಂದರು.

ಒಂದು ತುಂಬ ಸಂಪ್ರದಾಯಸ್ಥ ಕುಟುಂಬವೊಂದರಲ್ಲಿ ಹುಟ್ಟಿಬೆಳೆದು, ತಮ್ಮ ಸುತ್ತಲ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತ ತಮ್ಮ ಬರವಣಿಗೆಗೆ ಬೇಕಾದ ಮೂಲ ಜೀವದ್ರವ್ಯಗಳನ್ನು ವೈದೇಹಿ ಪಡೆದ ಬಗೆಯೇ ಒಂದು ರೋಚಕ ಕಥನವಾಗಿದೆ. ಅವರ ಹಲವಾರು ಪ್ರಬಂಧಗಳಲ್ಲಿ ಮತ್ತು 'ಲೇಖಕಿಯ ಪುಟಗಳು' ಎಂಬ ದೀರ್ಘವಾದ ಆತ್ಮಕಥಾನಕ ಬರಹದಲ್ಲಿ ಇದನ್ನು ಗಮನಿಸಬಹುದು. ಒಟ್ಟಿನಲ್ಲಿ ವೈದೇಹಿಯವರ ಎಲ್ಲಾ ಬರವಣಿಗೆಯ ಮೇಲೆ ಕರಾವಳಿ ಪ್ರದೇಶದ ಸಂಪ್ರದಾಯ, ನಂಬಿಕೆ, ಆಚಾರ-ವಿಚಾರ, ಕಟ್ಟುಪಾಡು, ಮೂಢನಂಬಿಕೆಗಳು ಪ್ರಭಾವ ಬೀರಿವೆ ಎನ್ನಬಹುದಾಗಿದೆ.

# ವೈದೇಹಿಯವರ ಕಥಾನಿರೂಪಣಾತಂತ್ರ

ವೈದೇಹಿಯವರು ಆರಂಭದ ದಿನಗಳಲ್ಲಿ ಬರೆದ ಕಥೆಗಳು ಅತ್ಯಂತ ಪ್ರಾಮಾಣಿಕವಾದ ಅನಾತುರದ ದೃಢಹೆಜ್ಜೆಗಳಲ್ಲಿ ಲೇಖಕಿ ಬಹು ಸಹಜವಾಗಿ ಬೆಳೆಯುತ್ತ ಬಂದುದನ್ನು ಸ್ಫುಟವಾಗಿ ಮನಗಾಣಿಸಿಕೊಡುತ್ತವೆ. ಅನುಭವಗಳನ್ನು ಕಥಾರೂಪದಲ್ಲಿ ಹರಳುಗಟ್ಟಿಸಿಕೊಳ್ಳುವ ಜತೆಜತೆಗೇ, ಕಥೆಕಟ್ಟುವ ಚಾತುರ್ಯಕ್ಕೆ ಬಲಿಕೊಟ್ಟುಕೊಳ್ಳದೆ ಕಥೆಯ ಸೆರೆಯಿಂದ ಬಿಡಿಸಿಕೊಳ್ಳಲು ಹವಣಿಸುವಂತಹ ಬಿಗುವಿನ ಪದ, ತನ್ನದೇ ಸಾಚಾ ಅನುಭವಗಳನ್ನು, ಇವು ಕ್ಷುಲ್ಲಕವೆನಿಸಿಯಾವೋ ಎಂಬ ಸಂದೇಹ ಸಂಕೋಚಗಳಿಂದ ಬಾಧಿತವಾಗದೆ, ನಿಷ್ಠೆಯಿಂದ ಆಧರಿಸುವ ಹಾಗೂ ಈ ಸ್ವಂತಿಕೆಯ ಮಿತಿಯಲ್ಲೇ ತನ್ನತನವನ್ನು ಮೀರಿಕೊಳ್ಳಲು ಪ್ರಯತ್ನಿಸುವ ಸೃಜನಪ್ರಜ್ಞೆ ಮುಂತಾದ ಹಲವು ಅಪರೂಪದ ಗುಣಗಳ ಬೆಳವಣಿಗೆಯನ್ನು ಈ ಸಂಕಲನದಲ್ಲಿ ಕಾಣಬಹುದು.

ವೈದೇಹಿ ಬರಹಗಳ ಕೇಂದ್ರ ಹೆಣ್ಣು. ಈ ಹೆಣ್ಣು ವಿವಿಧ ಜಾತಿ, ವಯಸ್ಸು, ಅಂತಸ್ತು, ಸಂವೇದನೆಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ತೀರಾ ಸಂಪ್ರದಾಯಸ್ಥರಿಂದ ತೀರ ಆಧುನಿಕರವರೆಗೆ, ಅವಿವಾಹಿತೆಯರಿಂದ ವಿಧವೆಯರವೆರೆಗೆ, ಗೃಹಿಣಿಯರಿಂದ ವೇಶ್ಯೆಯರವೆರೆಗೆ ಈ ಪ್ರಪಂಚ ಹರಡಿಕೊಳ್ಳುತ್ತದೆ. ಇಲ್ಲಿ ವಿದ್ಯಾವಂತರು ಅವಿದ್ಯಾವಂತರು, ಕಳ್ಳರು, ಹುಚ್ಚರು ಇದ್ದಾರೆ. ಶೋಷಿಸುವವರು ಶೋಷಣೆಗೆ ಒಳಗಾದವರು ಇದ್ದಾರೆ. ಅಂದರೆ ವೈದೇಹಿ ಕಥೆಗಳಲ್ಲಿ ಹೆಣ್ಣು ಒಂದು ಸಿದ್ಧಮಾದರಿಯಲ್ಲಿ ಕಾಣಿಸಿಕೊಳ್ಳದೆ ವಿವಿಧ ಆಕೃತಿಗಳಲ್ಲಿ, ಭಾವಸ್ಥಿತಿಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ಈ ವೈವಿಧ್ಯವೇ, ಬಹುರೂಪತೆ – ಬಹುಧ್ವನಿಗಳೇ ವೈದೇಹಿಯವರನ್ನು ನಮ್ಮ ಕಾಲದ ಬಹು ಮುಖ್ಯ ಬರಹಗಾರ್ತಿಯರಲ್ಲಿ ಒಬ್ಬರನ್ನಾಗಿ ಮಾಡಿರುವುದು. ಜೀವನವೆನ್ನುವುದು ಅಸಂಖ್ಯ ಬಣ್ಣ, ಚಹರೆ, ವಾಸನೆಗಳಿಂದ ಕೂಡಿರುವಂಥದ್ದು ಎಂಬ ಸಂಕೀರ್ಣಗ್ರಹಿಕೆಯೂ ಒಂದು ಮಾನವೀಯ ಸನ್ನಿವೇಶದ ಹಿಂದೆ ಹಲವು ಬಗೆಯ ಒತ್ತಡಗಳಿರುತ್ತವೆ ಎಂಬ ಗಾಢ ತಿಳುವಳಿಕೆಯು ಇಲ್ಲಿ ಕೆಲಸಮಾಡಿದೆ. ಅವರು ಬದುಕನ್ನು ಹೆಣ್ಣಿನ ದೃಷ್ಟಿಕೋನದಿಂದ ಗಮನಿಸುತ್ತಾರೆ. ಆದರೆ ಅದು ಸರಳವಾದ 'ಸ್ತ್ರೀಪರ', 'ಪುರುಷವಿರೋಧಿ' ತೀರ್ಮಾನಗಳಲ್ಲಿ ಪರ್ಯಾವಸನಗೊಳ್ಳುವುದಿಲ್ಲ. ಲಿಂಗ ಅಸಮಾನತೆಯ ಪ್ರಶ್ನೆಗಳನ್ನು ಅವರು ತುಂಬ ಪ್ರಬುದ್ಧವಾಗಿ ನಿರ್ವಹಿಸಿದ್ದಾರೆ. ಯಾವುದೇ ಮನುಷ್ಯರ ಅಥವಾ ವರ್ಗಗಳ ಜೀವನ ಸಾಫಲ್ಯಗಳ ಪ್ರಶ್ನೆಯು ಎಲ್ಲ ಮನುಷ್ಯರ ಮತ್ತು ವರ್ಗಗಳೊಂದಗಿನ ಒಟ್ಟಾರೆ ಸಂಬಂಧದ ಪ್ರಶ್ನೆಯೇ ಆಗಿರುತ್ತದೆ, ಎಂಬ ಎಚ್ಚರದಲ್ಲಿ ಅವರು ಜೀವನ ಸಂಧರ್ಭಗಳನ್ನು ಪರಿಶೀಲಿಸುತ್ತಾರೆ. ಹಾಗೆಂದು ಅವರ ಕಥನಗಳು ತೆಳು ಭಾವುಕ ಅನುಕಂಪದಲ್ಲಿ ಇಲ್ಲವೇ ಸರಳ ಉದಾರಿ ನಿಲುವುಗಳಲ್ಲಿ

ಅಳಕಗೊಳ್ಳುವುದಿಲ್ಲ. ಹೆಣ್ಣನ್ನು ಹಲವು ಮನುಷ್ಯ ಸಂದರ್ಭಗಳಲ್ಲಿ ಇಟ್ಟು ನೋಡುವಾಗಲೂ ಒಂದು ಲಿಂಗವಾಗಿ ಹೆಣ್ಣಿನ ಅನನ್ಯ, ವಿಶಿಷ್ಟ ಸ್ಥಿತಿ ಅವರ ಅವಲೋಕನವನ್ನು ತಪ್ಪಿಸಿಕೊಳ್ಳುವುದಿಲ್ಲ. ಈ ದೃಷ್ಟಿಯಿಂದ ಅವರ ಬರಹಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿವೆ.

ವೈದೇಹಿಯವರು ಅಸ್ಪೃಶ್ಯತೆಯನ್ನು ಎರಡು ನೆಲೆಗಳಲ್ಲಿ ನಿರ್ವಹಿಸುತ್ತಾರೆ. ಒಂದು ಸಾಮಾಜಿಕ ಶ್ರೇಣೀಕರಣದ ಜಾತಿಯ ನೆಲೆ, ಬ್ರಾಹ್ಮಣ-ಕೊರಗರು, ಬ್ರಾಹ್ಮಣರು-ಕ್ರಿಶ್ಚಿಯನ್ನರ ಸಂಬಂಧಗಳಲ್ಲಿ ವ್ಯಕ್ತವಾಗುವ ಮೇಲು-ಕೀಳಿನ, ಮಡಿ-ಮೈಲಿಗೆಯ ನೆಲೆ. ಇನ್ನೊಂದು, ಎಲ್ಲಾ ಜಾತಿಗಳಿಗಿಂತ ಬ್ರಾಹ್ಮಣ ಜಾತಿಯೆ ಮೇಲು ಎಂದುಕೊಳ್ಳುವವರ ಪ್ರಪಂಚದಲ್ಲೂ ಆ ಜಾತಿಯ ಹೆಂಗಸರು ತಮ್ಮ ಜೈವಿಕ ಸ್ಥಿತಿಯ ಕಾರಣ ತಮ್ಮ ಬದುಕಿನ ಕೆಲ ಭಾಗವನ್ನು ಅಸ್ಪೃಶ್ಯರಾಗಿ ಕಳೆಯಬೇಕಾದ ವಿಪರ್ಯಾಸವನ್ನು ಕಥೆಗಳಲ್ಲಿ ತಿಳಿಸುತ್ತಾರೆ. ಲಿಂಗದ ನೆಲೆಯಲ್ಲಿ 'ಕೀಳು' ಪದವಿ ಪಡೆದ ಈ 'ಅಸ್ಪೃಶ್ಯ' ಬ್ರಾಹ್ಮಣ ಹೆಂಗಸರು ಒಂದು ಜಾತಿಯಾಗಿ ತಾವು ಶ್ರೇಷ್ಟರು ಎಂದು ಬೀಗುತ್ತಾ ಇತರ ಜಾತಿಯ ಗಂಡಸರು ಮತ್ತು ಹೆಂಗಸರನ್ನು ಅಸ್ಪೃಶ್ಯರಾಗಿ ಪರಿಗಣಿಸುವುದು. ಅಂದರೆ ಮಹಿಳೆಯರಾಗಿ ಕೂಡ ಅಂದರೆ, ಲಿಂಗದ ನೆಲೆಯಲ್ಲಿ ಕೂಡ ಬ್ರಾಹ್ಮಣ, ಕ್ರಿಶ್ಚಿಯನ್ ಮತ್ತು ಕೊರಗರು ಒಂದು ಸಮಾನ ನೆಲೆಗೆ ಬಾರದ ವಿಚಾರ ಇವರ ಕಥೆಗಳಲ್ಲಿದೆ.

ಹೆಣ್ಣಿನ ಅವಸ್ಥೆಯ ಚಿತ್ರಗಳಲ್ಲೂ ಅಪಾರ ವೈವಿಧ್ಯ ಕಂಡುಬರುತ್ತದೆ. ವೈದೇಹಿ ಪ್ರಪಂಚದಲ್ಲಿ ಎಲ್ಲವನ್ನೂ ಕೇವಲ ಸಹಿಸಿಕೊಳ್ಳುವವರಿದ್ದಾರೆ. ಹಾಗೆಯೆ ಗಂಡಸರ ಪಾತ್ರ ನಿರ್ವಹಣೆಯಲ್ಲೂ ಇಂಥ ವೈವಿಧ್ಯ – ಸಂಕೀರ್ಣತೆ ಇವೆ. ಸ್ತ್ರೀ ಪುರುಷರಿಬ್ಬರೂ ಒಟ್ಟಿಗೆ ಪ್ರಬುದ್ಧರಾದಾಗ ಮಾತ್ರ ಈ ಗಂಡು – ಹೆಣ್ಣು ಬೇಧವನ್ನು ದಾಟಬಹುದೆಂಬ ಸೂಚನೆ ಅವರ ಅನೇಕ ಬರಹಗಳಲ್ಲಿದೆ. ಉದಾಹರಣೆಗೆ ಅವರ "ಮರೆವು" ಎಂಬ ಸರಳ ಸುಂದರ ಕಥೆಯನ್ನೇ ನೋಡಬಹುದು. ಹಲವು ವರ್ಷಗಳ ದಾಂಪತ್ಯವನ್ನು ಅನುಭವಿಸಿ, ಮಕ್ಕಳು ಮೊಮ್ಮಕ್ಕಳನ್ನು ಪಡೆದ ಇಬ್ಬರು ಪಕ್ವಜೀವಿಗಳು ತಮ್ಮ ಜೀವನದ ಇಳಿಗಾಲದಲ್ಲಿ ಸೂಚಿಸುವ ದರ್ಶನ ಮೌಲಿಕವಾದದ್ದು. "ಒಟ್ಟಿಗೇ ಬದುಕಿ ಬದುಕಿ ಕಡೆಗೆ ಹೆಣ್ಣು ಗಂಡು ಎಂಬ ಮಾಯೆಯೆ ಪರಸ್ಪರರಲ್ಲಿ ಮಾಯವಾಗಿ ಕೇವಲ ಜೀವಿಗಳಾಗಿಬಿಡುತ್ತೆವೆಯೇ" ಎಂದು ಆ ದಂಪತಿ ಒಮ್ಮೆ ಅಂದುಕೊಳ್ಳುತ್ತಾರೆ. ಅವರು ತಮ್ಮ ಪಾತ್ರಗಳನ್ನು ಬದಲಿಸಿಕೊಳ್ಳುವ ಒಂದು ವಿನೋದಕರ ಪ್ರಸಂಗ ಇಲ್ಲಿ ನಿರೂಪಿತವಾಗಿದೆ. ಸೀರೆ ಉಟ್ಟುಕೊಂಡು ಅಡಿಗೆಮನೆಯಲ್ಲಿ ಮೊಮ್ಮಕ್ಕಳಿಗೆ ಊಟ ತಿಂಡಿಮಾಡಿಸುವ ಅಜ್ಜ 'ಅಜ್ಜಿ'ಯಾಗಿ ಪರಿವರ್ತಿತವಾದರೆ, ಪಂಚೆಯುಟ್ಟು ಪೇಟೆಗೆ ಹೋಗಿಬರುವ 'ಅಜ್ಜಿ ಅಜ್ಜ'ನಾಗಿ ರೂಪಾಂತರಗೊಳ್ಳುವ ಅಸಂಭವನೀಯ ಎನ್ನಿಸಬಹುದಾದ ಸನ್ನಿವೇಶದ ಮೂಲಕ ಲೇಖಕಿಯ ಜೀವನದೃಷ್ಟಿ ಸೂಚಿತವಾಗುವಂತಿದೆ.

ಅಂದರೆ ಪುರುಷ ಪ್ರಧಾನ ಸಮಾಜದಲ್ಲಿ ಕೆಲವೊಂದು ಕೆಲಸಗಳು ಸ್ತ್ರೀಗೆಂದೇ ಮೀಸಲಾಗಿರುತ್ತದೆ. ಆದರೆ ಜೀವನದ ಕೊನೆಯಕ್ಷಣದಲ್ಲಿ ಈ ಯಾವ ಬೇಧವು ಕಾಣುವುದಿಲ್ಲ ಎಂದೆನ್ನುತ್ತಾರೆ.

ಲೇಖಕಿ ಒಂದು ಸೀಮಿತ ಆವರಣದಲ್ಲಿ ಬರೆಯುತ್ತಾರೆ ಎಂದು ಮೇಲುನೋಟಕ್ಕೆ ಅನ್ನಿಸಿದರೂ ವೈದೇಹಿ ಬರಹಗಳು ಬದುಕಿನ ಅನೇಕ ಮುಖ್ಯಪ್ರಶ್ನೆಗಳನ್ನು ಸೂಕ್ಷ್ಮವಾಗಿ ಅನುಸಂದಾನ ಮಾಡಿವೆ. 'ಲೈಂಗಿಕತೆ'ಯ ಪ್ರಶ್ನೆಯನ್ನು ಅವರು ಹಲವು ದೃಷ್ಟಿಗಳಿಂದ ಪರೀಕ್ಷಿಸಿದ್ದಾರೆ. ಮದುವೆ, ಕುಟುಂಬದಂಥಹ ಸಾಮಾಜಿಕ ಸಂಸ್ಥೆಗಳನ್ನು ಆಳವಾದ ಪರೀಶೀಲನೆಗೆ ಒಡ್ಡಿದ್ದಾರೆ. ಜಾತಿ ವರ್ಗಗಳ ಇಕ್ಕಟ್ಟುಗಳನ್ನು ಸಮಸ್ಯಾತ್ಮಕಗೊಳಿಸಿ ನೋಡಿದ್ದಾರೆ. ಸಾಮಾಜಿಕ – ಸಾಂಸ್ಕೃತಿಕ ಪಲ್ಲಟಗಳನ್ನು ನಿರೂಪಿಸಿದ್ದಾರೆ. ಈ ದೃಷ್ಟಿಯಿಂದ ಅವರ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಭಾರತದ ಪ್ರಧಾನಧಾರೆಯ ಕಥಾಸಾಹಿತ್ಯಕ್ಕೆ ಒಂದು ಅಮೂಲ್ಯ ಕೊಡುಗೆ ಎಂದು ಹೇಳಬಹುದು. ಭಾರತ ವಿಭಜನೆಯ ದುರಂತ ಪರಿಣಾಮವನ್ನು 'ಕ್ರೌಂಚಪಕ್ಷಿಗಳು' ಕಥೆಯಲ್ಲಿ ಅನನ್ಯವೆನಿಸುವ ದಾಟಿಯಲ್ಲಿ ಕಟ್ಟಿಕೊಟ್ಟ ಅಖಿಲ ಭಾರತ ವ್ಯಾಪ್ತಿಯ ವಸ್ತುವೊಂದನ್ನು ಸ್ಪರ್ಷಿಸಿ ಬಿಟ್ಟಿದ್ದಾರೆ. ಅಷ್ಟೇ ಅಲ್ಲ ನಮ್ಮ ಪ್ರಾಚೀನ ಸಾಹಿತ್ಯಕ್ಕೂ ಸ್ಪಂದಿಸಿ, ಆ ಮುಖಾಮುಖಿಯಲ್ಲಿ ಹೊಸಪಠ್ಯವನ್ನು ಸೃಷ್ಟಿಸಿದ್ದಾರೆ. ಈ ದೃಷ್ಟಿಯಿಂದ 'ಶಕುಂತಲೆಯೊಡನೆ ಕಳೆದ ಅಪರಾಹ್ನ'ಕ್ಕೂ ಒಂದು ಬಗೆಯ ಅಖಿಲ ಭಾರತ ವ್ಯಾಪ್ತಿ ಇದೆ. 'ಕ್ರೌಂಚ ಪಕ್ಷಿಗಳು' ಕಥೆಯು ಒಂದು ದೃಷ್ಟಿಯಲ್ಲಿ ಬೇರೆ ವಿವರಗಳಲ್ಲಿ ರಾಮಾಯಣದ ಪುನರ್ ಸೃಷ್ಟಿ ಎಂದೇ ಹೇಳಬಹುದು. ವಸ್ತು ಯಾವುದೇ ಆಗಿರಲಿ, ಸನ್ನಿವೇಶಗಳು ಯಾವುದೇ ಆಗಿರಲಿ, ಅವುಗಳನ್ನು ನಿರ್ವಹಿಸುವ ಪ್ರಜ್ಞೆ ಮಾತ್ರ ಲೇಖಕಿಯ ಪ್ರಕರವಾದ ಸ್ತ್ರೀಪ್ರಜ್ಞೆಯೆ. ವೈದೇಹಿ ಸಿದ್ಧಾಂತಗಳ ಮೂಲಕ ಬದುಕನ್ನು ಗ್ರಹಿಸುವವರಲ್ಲ. ಆದರೆ ಅವರ ಗ್ರಹಿಕೆ ಮತ್ತು ಅಭಿವ್ಯಕ್ತಿಗಳ ಸ್ವರೂಪ ಹೇಗಿವೆಯೆಂದರೆ ಬರೆದವರು ಯಾರೆಂದು ಗೊತ್ತಿಲ್ಲದಿದ್ದರು ಬರವಣಿಗೆಯನ್ನು ಮಾಡಿದವರು ಸೂಕ್ಷ್ಮ ಮನಸ್ಸಿನ ಓರ್ವ ಲೇಖಕಿಯೇ ಇರಬೇಕು ಎನ್ನುವಷ್ಟು ಅವರ ಸ್ತ್ರೀ ಸಂವೇದನೆ ಗಾಢವಾಗಿದೆ. 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕಥೆಯ ಆರಂಭವನ್ನೇ ನೋಡಿ; "ಅದು ಬೈತಲೆಯಂತೆ ಒಂದೇ ರಸ್ತೆಯಿರುವ ಊರು", ಲೇಖಕನಿಗೆ ಇಂಥಹ ಉಪಮೆ ಹೊಳೆಯಲು ಸಾಧ್ಯವಿಲ್ಲ. ಈ ಕಥೆಯಲ್ಲಿ ವೈದೇಹಿ ಒಂದು ಮುಖ್ಯ ಸಾಮಾಜಿಕ ಪಲ್ಲಟವನ್ನು ಕುರಿತು ಹೇಳುತ್ತಾರೆ. ಅದನ್ನು ಮಹಿಳೆಯರ ದೃಷ್ಟಿಕೋನದಿಂದ ಹೇಳುತ್ತಾರೆ. ಸಿನಿಮಾ ಮಹಿಳೆಯರ ಮನೋಲೋಕದಲ್ಲಿ ಮತ್ತು ಸಾಮಾಜಿಕ ಲೋಕದಲ್ಲಿ ತಂದ ಪಲ್ಲಟಗಳನ್ನು ವರ್ಣಿಸುವಾಗ, 'ಸಿನಿಮಾ ನೋಡಲಿಕ್ಕಾಗಿ ಹೆಂಗಸರು ಮುಟ್ಟಾಗುವುದನ್ನೇ ಕಾಯುತ್ತಾ ಮಡಿ ಮೈಲಿಗೆಯ ಪರಿಧಿಯಲ್ಲಿ ಒಂದು ಥಳಕನ್ನೇ ಹುಟ್ಟಿಸಿದ್ದು' ಲೇಖಕಿಯ

ಗಮನವನ್ನು ತಪ್ಪಿಸಿಕೊಳ್ಳುವುದಿಲ್ಲ. ಊರಿನ ಸೂಲಗಿತ್ತಿ ಲಿಲ್ಲೀಬಾಯಿ ಗೇಟ್ ಕೀಪರ್ ಕೆಲಸಕ್ಕೆ ಸೇರಿಕೊಂಡಾಗ, 'ಗಂಡಸರೆದುರು ಹೆರುವುದೇ? ಎಂಬ ಕಾರಣಕ್ಕಾಗಿ ಮೊಲೆಗೊತ್ತಲ್ಪಟ್ಟ ಆ ಊರಿನ ಡಾಕ್ಟರ್ ಶಾಮು ಸುಣ್ಣ ಬಣ್ಣದಿಂದ ಶೋಭಿಸಲಾರಂಭಿಸಿತು'. ಹೆಂಗಸರಿಗೆ ತಮ್ಮ ಅಸ್ಮಿತೆಯ ಅರಿವು ಮೂಡಿದ್ದು ಅದರಿಂದಾಗಿ ಅದರ ಲೋಕವ್ಯವಹಾರಗಳ ಪರಿಯಲ್ಲೇ ಬದಲಾವಣೆಗಳು ಗೋಚರವಾಗತೊಡಗಿದ ಸಂಕೀರ್ಣ ವಿದ್ಯಮಾನಗಳನ್ನು ಲಘುಧಾಟಿಯಲ್ಲೇ ಕಥೆ ನಿರೂಪಿಸುವ ಕ್ರಮ ಅನನ್ಯವಾಗಿದೆ.

ವೈದೇಹಿಯವರ ಕೆಲವು ಕಥೆಗಳು ಅವರ ಹೊಸಹುಡುಕಾಟವನ್ನು ದಾಖಲಿಸುತ್ತವೆ. ಕಥೆಗಳ ಹಿಂದೆ ಗಂಡು, ಹೆಣ್ಣುಗಳು ಕೂಡಿರುವ ಒಂದು ಲೋಕವಿದೆ. ಈ ಲೋಕದಲ್ಲಿ ಮಿಥುನವಿರುವಂತೆಯೇ ವಿಚ್ಛೇದನವೂ ಇದೆ; ಒಂದೆಡೆ ಉಲ್ಲಾಸದ ಉಬ್ಬರ ಕೆಲವೊಮ್ಮೆ ಮೊರೆದು ಕಾಣಿಸಿಕೊಂಡರೆ ಕೆಲವೊಮ್ಮೆ ಹಿಂಸೆಯ ನೆರಳು ಚಾಚಿಕೊಳ್ಳುತ್ತದೆ. ಪಾತ್ರಗಳಲ್ಲಿ ಸನ್ನಿವೇಶಗಳಲ್ಲಿ ಮತ್ತು ಇಡಿಯ ಕಥನಕ್ರಮದಲ್ಲಿ ಹೀಗೆ ವಿರುದ್ಧ ಭಾವಗಳನ್ನ ಮಿಥುನಗೊಳಿಸಿ ಕಾಣಿಸುವ ಒಂದು ವಿಶಿಷ್ಟ ಕಲೆಗಾರಿಕೆ ಪ್ರಾಯಶಃ ವೈದೇಹಿಯವರ ಕಥೆಗಳಲ್ಲಿ ಪ್ರಮುಖವಾದದ್ದಾಗಿದೆ.

ವೈದೇಹಿ ಸರಳವಾಗಿ ಬರೆದೂ ಸಂಕೀರ್ಣವಾದ ಭಾಷೆ ಸಾಧಿಸುತ್ತಾರೆ. ಮಾಸ್ತಿಯವರ ಸಣ್ಣಕಥೆ, ಕಾರಂತರ ಕಾದಂಬರಿಗಳು ಹಿರಿಮೆಗೆ ಕಾರಣವಾಗಿದ್ದ ಈ ಗುಣ ತನ್ನಲ್ಲಿ ಪ್ರಜ್ಞಾಪೂರ್ವಕವಾಗಿ ಮೈಗೂಡಿಸಿಕೊಂಡ ಸಣ್ಣ ಕಥೆಗಾರರಲ್ಲಿ ವೈದೇಹಿ ಒಬ್ಬರು. ಹಾಗೆಂದೇ 'ಒಂದು ಅಪರಾಧ ತನಿಖೆ' ಇತ್ಯಾದಿ ಕಥೆಗಳಲ್ಲಿ ಬದುಕಿನ ವಿವರಗಳನ್ನ ಗ್ರಹಿಸುವ ಇವರ ಪರಿ ಮೆಚ್ಚುಗೆಗೆ ಪಾತ್ರವಾಗುತ್ತದೆ. ಕಥೆಯ ಒಟ್ಟಾರೆ ಬಂಧದ ವಿಚಾರದಲ್ಲಿ ಇವರ ಎಲ್ಲಾ ಕಥೆಗಳನ್ನು ಗಮನಿಸಿದಾಗ ಇವರು ಪ್ರಬುದ್ಧ ಲೇಖಕರೆಂದೆನಿಸುತ್ತದೆ. ವೈದೇಹಿಯವರನ್ನ ಮಹಿಳಾ ಬರಹಗಾರ್ತಿ ಎನ್ನುವ ಪರಿಮಿತ ಚೌಕಟ್ಟಿನಲ್ಲಿ ಇಟ್ಟು ನೋಡಿ ಮೆಚ್ಚಬೇಕಾದ ಪ್ರಮೇಯವಿಲ್ಲ. ಕನ್ನಡದ ಹೊಸಪೀಳಿಗೆಯ ಯಾವುದೇ ಸಣ್ಣ ಕಥೆಗಾರರಿಗೆ ಸರಿಸಾಟಿಯಾಗಬಲ್ಲದು ಇವರ 'ಕಥನ ತಂತ್ರ'.

ಕಥೆಗಳಿಗೆ ಕಾವ್ಯದ ಸೊಬಗನ್ನು ತಂದವರು ವೈದೇಹಿ. ಅವರ ಹಾಗೆ ಭಾಷೆಯನ್ನು ದುಡಿಸಿಕೊಂಡ ಲೇಖಕರು ಕನ್ನಡದಲ್ಲಿ ಅಪರೂಪ. ಇವರ ಕಥೆಗಳಲ್ಲಿ ವಸ್ತುವಿಗಿಂತ ಭಾವಕ್ಕೆ, ತಂತ್ರಕ್ಕೆ ಮತ್ತು ಧ್ವನಿಗೇ ಪ್ರಾಧಾನ್ಯ. ಈ ಬಗೆಯ ಕಥೆಗಳು ಕನ್ನಡಕ್ಕೆ ಹೊಸವು. ಇವರು ತಮ್ಮ ಕಥೆಗಳಲ್ಲಿ ಸೆರೆಹಿಡಿದಿರುವ ಒಂದು ಭಾವ, ಒಂದು ಭಂಗಿ, ಒಂದು ದೃಶ್ಯ, ಒಂದು ಮಾತಿನ ವಿಲಾಸ ಹೆಕ್ಕಿ ತೆಗೆದಿಟ್ಟು ಹೃದಯದ ಹತ್ತಿರ ಇಟ್ಟುಕೊಳ್ಳಂತವು ಮತ್ತೆ ಮತ್ತೆ ನೋಡಲಿಕ್ಕಾಗಿ, ಮೊಗೆದಷ್ಟು ಸಿಗುವ ಅನುಭವ, ಸಂಪತ್ತು ಇಲ್ಲಿ

ಅಕ್ಷಯವಾಗಿದೆ. ಇವರು ವಾಸ್ತವತೆ ಮತ್ತು ಫ್ಯಾಂಟೆಸಿಗಳ ಮಧ್ಯೆ ಭಾವಾಭಾಷೆಗಳ ಸೇತುವೆ ನಿರ್ಮಿಸಿ ಬೇರೊಂದು ಲೋಕವನ್ನೇ ನಮ್ಮ ಮುಂದೆ ಅನಾವರಣಗೊಳಿಸುತ್ತವೆ.

ಇತ್ತೀಚೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ತಂದುಕೊಟ್ಟಿರುವ ಇವರ ಇತ್ತೀಚಿನ ಕಥಾಸಂಕಲನ 'ಕ್ರೌಂಚ ಪಕ್ಷಿಗಳು' ಪ್ರಮುಖವಾದುದಾಗಿದೆ. ಕಥೆಗಾರ್ತಿಯಾಗಿ ಶೋಧ, ಕ್ರೌಂಚಪಕ್ಷಿಗಳು ಎಂಬ ಹತ್ತು ಕಥೆಗಳ ಈ ಸಂಕಲನದಲ್ಲಿ ಹೊಸದೊಂದು ಎತ್ತರವನ್ನೇ ಮುಟ್ಟಿಬಿಟ್ಟಿದೆ. ಹಿಂದಿನ ಕಾಳಜಿಗಳು, ಆಶಯಗಳು ಮುಂದುವರೆದಿರುವಂತೆ ಈಗ ಅವುಗಳ ಜೊತೆ ಮಾತು ಕಥನ, ಸಂವಹನಗಳನ್ನು ಕುರಿತ ಗಾಢ ಜಿಜ್ಞಾಸೆಯು ಸೇರಿ ಬರಹ ಇನ್ನಷ್ಟು ಸಂಕೀರ್ಣವಾಗಿದೆ. 'ಮಾತು ಸೋತ ಕ್ಷಣ' ಎಂಬ ಕಥೆಯಲ್ಲಿ ಸಾವಿನ ಎದುರು ಮಾತೇ ಹೊರಡದ ವೃದ್ಧರೊಬ್ಬರ ಅವಸ್ಥೆಯನ್ನು ಚಿತ್ರಿಸುತ್ತಾ ವೈದೇಹಿ ಅವರ ಬರಹವು ಆ ವೃದ್ಧರ ಮೌನದಲ್ಲಿ, ಮೌನವನ್ನು ಒಡೆಯುವ ನಿಷ್ಫಲ ಪ್ರಯತ್ನದಲ್ಲಿ, ಮಾತಾಡಿಸಲು ಬಂದು ಮಾತೇ ಹೊರಡದ ವ್ಯಂಗ್ಯದಲ್ಲಿ, ಮಾತಾಡದೇ ತಮ್ಮ ಸ್ಪಂದನದ ತೀವ್ರತೆಯನ್ನು ಓದುಗರಿಗೆ ಮುಟ್ಟಿಸುವ ಪ್ರಕ್ರಿಯೆಯಲ್ಲಿ ಸಂವಹನದ ಸ್ವರೂಪವನ್ನೇ ಸಮಸ್ಯಾತ್ಮಕಗೊಳಿಸಿದೆ. ಇದಕ್ಕೆ ತದ್ವಿರುದ್ಧವೆಂಬಂತೆ ಬೇರೆಯವರನ್ನು ಕುರಿತ ಕಥನ ಮತ್ತು ಅಭಿನಯದ ಅತಿ ವಾಚಾಳಿತನದಲ್ಲಿ ತಮ್ಮ ಅಂತರಂಗದಲ್ಲಿ ಅದುಮಿಟ್ಟ ಭಾವನೆಗಳನ್ನೇ ಸೂಚ್ಯವಾಗಿ ಧ್ವನಿಸಲು ಹವಣಿಸುವ ಮತ್ತೊಂದು ಸಂವಹನದ ಮಾದರಿಯು 'ನಟಿ' ಮತ್ತು 'ಸಬಿತಾ' ಎಂಬ ಕಥೆಗಳಲ್ಲಿ ಗೋಚರವಾಗುತ್ತದೆ. 'ದಾಳಿ' ಎಂಬ ಕಥೆಯಲ್ಲಿ ಅಂತರಂಗದ ಪ್ರಚೋದಕವಾದ ಮಾತಿಗೆ ಮೌನವೇ ಅದಕ್ಕಿಂತ ಸೂಕ್ತವಾದ ಶಕ್ತಿಶಾಲಿ ಪ್ರತಿಕ್ರಿಯೆಯಾಗುವ ಚೋದ್ಯವಿದೆ. 'ಪ್ರಶ್ನೆ' ಕಥೆಯಲ್ಲಿ ಅಂತರಂಗದ ಅನಿಸಿಕೆಯು ಬಹಿರಂಗವಾಗಿ ವಾಸ್ತವವಾಗಿ ನಿಜವಾಗುವಗಳಿಗೆ ಬಂದೇಬಿಟ್ಟಾಗ ಹುಟ್ಟುವ ದಿಗ್ಭ್ರಮೆಯ ನಿರೂಪಣೆಯಿದೆ. ತೀರ ಪರಿಚಿತಳ ವರ್ತನೆಯೇ ಅಪರಿಚಿತವಾಗುವ ವಿಪರ್ಯಾಸ 'ಒಗಟು' ಕಥೆಯಲ್ಲಿದೆ.

ಲೇಖಕಿ ತಮ್ಮ ಕಥೆಗಳ ಮೂಲಕ ಕರಾವಳಿಯ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅಲ್ಲಿಯ ಪರಿಸರ, ಸಮುದ್ರ ತೀರದ ಜನರ ಕಷ್ಟಸುಖಗಳು, ಆಚಾರ–ವಿಚಾರ, ಸಂಪ್ರದಾಯ, ಆಹಾರ ಕ್ರಮ, ಕೃಷಿ, ಕಲೆ, ಭಾಷೆ, ನಂಬಿಕೆ ಮೊದಲಾದ ವೈಶಿಷ್ಟ್ಯತೆಯನ್ನು ತಿಳಿಸುತ್ತಾರೆ. ವೈದೇಹಿಯವರು ತಮ್ಮ ಕಥೆಗಳಲ್ಲಿ ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಬಳಕೆಯಲ್ಲಿರುವ ಭಾಷೆಯನ್ನು ಬಳಸಿ ಕಥೆಗಳಲ್ಲಿ ಜೀವಂತಿಕೆಯನ್ನು ತೋರಿಸಿದ್ದಾರೆ.

ಜಾತಿಪದ್ಧತಿಯನ್ನು ಕುರಿತು ಇವರ ಕೆಲವು ಕಥೆಗಳು ತಿಳಿಸುತ್ತವೆ. ಅದೇ ರೀತಿ ಸ್ತ್ರೀಸಂವೇದನೆಗಳನ್ನು ತುಂಬಾ ಸೂಕ್ಷ್ಮವಾಗಿ ವಿವರಿಸಿದ್ದಾರೆ. ಇವರ ಕಥೆಗಳಲ್ಲಿ ಹೆಣ್ಣು ಕೇವಲ ಕಣ್ಣೀರು ಸುರಿಸುವ ಅಸಹಾಯಕಳಲ್ಲ. ಅವಳು ಸಬಲೆ ಸಂಸಾರದ ಜವಬ್ದಾರಿಯನ್ನು ನಿರ್ವಹಿಸಬಲ್ಲ ಸಾಮರ್ಥ್ಯವನ್ನು ಪಡೆದಿದ್ದಾಳೆ. ಹೀಗೆ ವಿವಿಧ ವೈವಿಧ್ಯಮಯ ವಿಚಾರಗಳನ್ನು ಲೇಖಕಿ ವ್ಯಕ್ತಪಡಿಸುತ್ತಾರೆ.

ನಮ್ಮ ಕಾಲದ ಬಹುಮುಖ್ಯ ಲೇಖಕಿಯಾದ ವೈದೇಹಿಯವರು ಜನಸಾಮಾನ್ಯರಿಗೂ ಅರ್ಥವಾಗುವ ಕಥೆಯನ್ನ ಬರೆದಿದ್ದಾರೆ. ಆ ಮೂಲಕ ತನ್ನ ಅನುಭವವನ್ನು ಓದುಗರಿಗೆ ಧಾರೆ ಎರೆದಿದ್ದಾರೆ.

## ವೈದೇಹಿಯವರ ಬರವಣಿಗೆಯನ್ನು ಪ್ರಭಾವಿಸಿದ ಅಂಶಗಳು

ವೈದೇಹಿಯವರು ತಮ್ಮ ಸುತ್ತಮುತ್ತಲಿನ ಪರಿಸರದೊಂದಿಗೆ ತಾನೂ ಒಬ್ಬಳಾಗಿ ಅಲ್ಲಿಯ ವೈವಿಧ್ಯತೆಯನ್ನು ಗಮನಿಸುತ್ತಾ ಬೆಳೆದವರು. ಯಾವುದೇ ಅಡೆತಡೆಯಿಲ್ಲದೆ ಬಾಲ್ಯವನ್ನು ಅನುಭವಿಸಿದವರು. ಇವರ ಕಾಲದಲ್ಲಿ ಊರುಗಳು ಆಗ ತಾನೆ ಆಧುನಿಕತೆಗೆ ತೆರೆದುಕೊಳ್ಳುತ್ತಿದ್ದವು. ಊರಿಗೆ ಟಾರು ರಸ್ತೆ, ವಿದ್ಯುತ್ತಿನ ಜೊತೆಗೇ ಹೊಸಬಗೆಯ ಶೌಚಗೃಹಗಳು ಪ್ರವೇಶಿಸುತ್ತಿದ್ದ ಕಾಲಘಟ್ಟ. ಈ ಎಲ್ಲಾ ಆಧುನಿಕತೆಯ ಮುಂದುವರಿಕೆಯೋ ಎಂಬಂತೆ ಮೊತ್ತ ಮೊದಲಾಗಿ ಒಂದು ಸಿನೆಮಾ ಟಾಕೀಸು. ಅದು ಇವರ ಮನೆಯ ಎದುರಿಗೆ, ಇದು ಈ ರಸ್ತೆಗೆ ಹೊಸ ರಂಗು ತಂದುಕೊಟ್ಟ ಘಟನೆ. ಅದುವರೆಗೆ ಟೆಂಟ್ ಸಿನಿಮಾಗಳಿಗೆ ಅತಿ ವಿರಳವಾಗಿ ಹೋಗುತ್ತಿದ್ದ ಒಳಮನೆಯ ಹಿರಿಕಿರಿಯರೆಲ್ಲ ಸಿನಿಮಾ ಎಂಬ ಕೌತುಕ ಕೈಗೆಟುಕುವಷ್ಟು ಹತ್ತಿರವಾಗಿ ಬಿಟ್ಟಿತು. ಅವರ ಜೀವನ ಗತಿಗೊಂದು ಹೊಸ ಉತ್ಸಾಹ ಬಂದಿತು, ಆಗಿನ್ನೂ ರೇಡಿಯೋ ಎಲ್ಲರ ಮನೆಗೂ ಸಾಮಾನ್ಯವಾಗಿರಲಿಲ್ಲ. ಅದು ಲೇಖಕಿಯ ಮನೆಗೆ ತೀರಾ ತಡವಾಗಿ, ಅರ್ವತ್ತರ ದಶಕದಲ್ಲಿ ಬಂದದ್ದು. ಹಾಗಾಗಿ ಸಹಜವೆಂಬಂತೆ ಅಂದು ಹಾಡು ಕಲಿಯುವುದಕ್ಕೂ, ಗೆಳತಿಯರೊಂದಿಗೆ ಮಾತುಕತೆಗೆ, ಕಥೆ ಹೇಳಲು ಕೇಳಲು ಸುಲಭವಾಗಿ ಒದಗೊದಗಿ ಬಂದದ್ದು ಸಿನಿಮಾಗಳೆ.

ಉಡುಪಿ ಎಂದರೆ ಉತ್ಸವಗಳ ಜಿಲ್ಲೆ. ಇಲ್ಲಿ ಹೆಜ್ಜೆಗೊಂದು ಜಾತ್ರೆ, ಉತ್ಸವ, ದೀಪೋತ್ಸವ, ಭೂತಕಾಲ, ದೇವರಷ್ಟೆ ಸಂಖ್ಯೆಯಲ್ಲಿ ದೈವ ಭೂತಗಳು. ಅದರಲ್ಲೂ ದೈವ ಭೂತಗಳೆಂಬ ವರ್ಗ. ಕೀಳುಭೂತಗಳಿಗೆ ಮತ್ತೇನಿಲ್ಲ ಎಮ್ಮೆ ದನ ಒಟ್ಟಾರೆ ಜಾನುವಾರುಗಳಿಗೆ ಉಪದ್ರ ಕೊಡುವುದೇ ಕೆಲಸ. ದನ ಹಾಲು ಕೊಡದಿರುವುದು, ತುಳಿಯುವುದು, ಕೆರಳುವುದು ಇತ್ಯಾದಿ ಮಾಡಿದರೆ ಭೂತದ ಉಪದ್ರ ಎಂದೇ ಅರ್ಥ. ಆಗ ಅದರ ಕತ್ತಿಗೆ ಮಂತ್ರಬಳ್ಳಿ ಕಟ್ಟುತ್ತಾರೆ. ಅದೂ ತಾಗದಿದ್ದರೆ ಭೂತಕ್ಕೆ ಹರಕೆ ಕಟ್ಟಿಕೊಳ್ಳುತ್ತಾರೆ. ಕೋಳಿಬಲಿಯು ಅಂತ ಹರಕೆಗಳಲ್ಲಿ ಒಂದು. ಇವರ ತಾಯಿ ಮನೆಯ ಪಕ್ಕದಲ್ಲೇ ಆಚೆಗೆ ಒಂದು ಹಾಯ್ಗುಳಿ ಭೂತದ ಸ್ಥಾನ. ಅಲ್ಲಿ ಪೂಜೆಯಾಗುವಾಗ 'ವ್ಞೀ' ಎಂದು ಒಂದೇ ಕೀರಲಿನಲ್ಲಿ ಕೀರುವ ವಾದ್ಯ. ಈ ವಾದ್ಯ ಕೇಳಿದಾಕ್ಷಣ ಲೇಖಕಿಯ ತಾಯಿ ಯಾರಿಗಾದರೊಬ್ಬರಿಗೆ ಹಣ್ಣು ಕಾಯಿ ಕೊಟ್ಟು ಕಳಿಸುತ್ತಿದ್ದರು. ಒಮ್ಮೊಮ್ಮೆ ಅಲ್ಲಿ ಹರಕೆಯವರಿಂದ ಕೋಳಿಬಲಿ ನಡೆಯುತ್ತಿರುತ್ತದೆ. ಕತ್ತು ಕತ್ತರಿಸಿದ ಕೋಳಿಗಳು ಪಟ ಪಟನೆ ಹಾರಿ ಹಾರಿ ಸಾಯುವ ದಾರುಣ ದೃಶ್ಯ ಇವರ ಮನದಲ್ಲಿ ಆಳವಾಗಿ ನೆಟ್ಟುಹೋಗಿದೆ.

ವೈದೇಹಿ ಜನಿಸಿದ ಸ್ಥಳದ ಜನ ಸಮುದಾಯ, ಪರಿಸರ, ಸಂವೇದನೆ, ದೊಡ್ಡ ಕುಟುಂಬದಲ್ಲಿ ಕಂಡ ಅನೇಕ ಬಗೆಯ ಬದುಕುಗಳು, ಮನೆಯಲ್ಲೇ ಒದಗುತ್ತಿದ್ದ ಹಲವು ಬಗೆಯ ಜನರ ಮಾತುಕತೆ, ಸುಖ-ದುಃಖ,

ಮನೆಯ ಹಿಂಬಾಗದ ಪ್ರಪಂಚ, ಲೇಖಕಿಯ ಮನೆಯ ಹಟ್ಟಿಯ ಪ್ರಪಂಚ. ದನ, ಎಮ್ಮೆ, ಕರುಗಳ ಒಡನಾಟ, ಚಾವಟಿಯಲ್ಲಿ ಇವರ ತಂದೆಯ ಆಫೀಸಿನಲ್ಲಿ 'ನಂಬ್ರ' ನಿಮಿತ್ತ ಬರುವ ಜನರು. ಅವರಲ್ಲಿ ಅನೇಕರು ಮನೆಯಲ್ಲಿ ಉಳಿದುಕೊಳ್ಳುತ್ತಲೂ ಇದ್ದ ಕಾಲ ಅದು. ವ್ಯಾಜ್ಯಕ್ಕಾಗಿ ತಂದೆಯೊಡನೆ ಮಾತಾಡಲು ಬರುತ್ತಿದ್ದ ಬಂಧುಗಳು ಒಳಗೂ ಬಂದು ವಿಶ್ರಮಿಸಿ ಬಾಯಾರಿಸಿದರೆ ನೀರು ಕುಡಿದು ಅದೂ ಇದೂ ಮಾತಾಡಿ ಹೋಗುತ್ತಿದ್ದ ದಿನಗಳು ಆ ಮನೆಯಲ್ಲಿ ಯಾರು ಬಂದರೂ ಹೆಚ್ಚಲ್ಲ. ಯಾರು ಯಾವಾಗ ಬೇಕಾದರೂ ಬಂದು ತಂಗಿ ಊಟಕ್ಕೂ ತಿಂಡಿಗೂ ಇದ್ದು ಲೋಕಸುತ್ತಿನ ಮಾತಾಡಿ ಹೋಗುತ್ತಿದ್ದರು. 'ಬನ್ನಿಬನ್ನಿ' ಎಂಬ ಸದಾ ಸ್ವಾಗತದ ಮನೆಯದು. ಹಿಂಬದಿಯ ಜಗಲಿಯೋ ಊರು ಮೇಲಿನ ಮಾತು, ನೂರಾರು ಕಥೆ, ಹಾಡು, ಹಸೆ, ಯಾರ್ಯಾರ ಟೀಕೆ ಟಿಪ್ಪಣಿ ಎಲ್ಲವೂ ಸತತ ಜರುಗುವ ಒಂದು ರಂಗಮಂಚವೇ ಆಗಿತ್ತೇನೊ. ಕೆಲಸದ ಪ್ರೀತಿಯ ಕಮಲ, ಚಂದು, ಸೀತು, ತರಕಾರಿಯವರು, ಹೊವಿನವರು, ಎಣ್ಣೆ ಮಾರುವ ಗಾಣಗಿತ್ತಿ, ಒಣಹುಲ್ಲಿನ ಗಾಡಿ, ಕಟ್ಟಿಗೆ ಗಾಡಿ, ಶನಿವಾರ ಸಂತೆಯ ಬೆಳಗಿನ ಜಾವ ಸಾಲುಸಾಲಾಗಿ ರಸ್ತೆಯ ಮೇಲೆ ಸಾಗುವ ಗಾಡಿಗಳ ಸದ್ದು, ಎತ್ತಿನ ಕುತ್ತಿಗೆಯ ಗಂಟೆಗಳ ನಿನಾದ, ಗಾಡಿ ಬೇಣದಲ್ಲಿ ಗುಂಪಾಗಿ ತಂಗುವ ಗಾಡಿಗಳು, ಅಲ್ಲೇ ಅಂಗಾತ ಬಿದ್ದು ಗೊರಸಿಗೆ ಲಾಳಿ ಹೊಡೆಸಿಕೊಳ್ಳುತ್ತಿರುವ ಎತ್ತುಗಳು, ಮನೆಮುಂದಿನ ಧೂಪದ ಮರ, ದೇವದಾರು ಮರ, ಮನೆಯಂಗಳಕ್ಕೂ ದೂರದಿಂದ ಸಣ್ಣಗೆ ಕೇಳುತ್ತಿದ್ದ ಅರಬ್ಬಿ ಸಮುದ್ರದ ಮೊರೆತ. ಅದರ ಕರೆ ಕೇಳಿ ಹೊಳೆವ ಹರಿವ ಹೊನ್ನಗಾಜಿನಂತೆ ಸ್ನಿಗ್ಧ ಗಂಭೀರವಾಗಿ ಕಡಲ ಕಡೆ ಮುಗಿದರೂ ಮುಗಿಸದೆ, ನಿತ್ಯಾ ಪಯಣ ಹೊರಟು ಕೊಂಡೇ ಇರುವ ಗಂಗೊಳ್ಳಿ ಹೊಳೆ, ಇವೆಲ್ಲಾ ಪ್ರಕೃತಿಯ ಸೊಬಗು ಲೇಖಕಿಯ ಅಂತರ್ಯವನ್ನು ಬೆಳಗಿದವು.

ಆಗೆಲ್ಲ ಮನೆಯ ಹೆಣ್ಣು ಮಕ್ಕಳಾಗಲೀ, ಹೆಂಗಸರಾಗಲೀ ಹೊರಗೆ ಚಾವಡಿಗೆ ಸೀದ ನುಗ್ಗಿ ಹೋಗುವಂತಿರಲಿಲ್ಲ. ಅದು ಗಂಡಸರ ಜಗತ್ತು, ಅಲ್ಲಿ ಹೆಂಗಸರು ಹೋಗಬೇಕಾದರೆ ಗಂಡಸರು ಇಲ್ಲದ ಹೊತ್ತು ಅಥವಾ ಅಪ್ಪ ಅಣ್ಣಂದಿರು ಇತ್ಯಾದಿ ಹತ್ತಿರದವರು ಮಾತ್ರ ಇರುವ ಹೊತ್ತು ಕಾಯಬೇಕು. ಲೇಖಕಿಯ ತಂದೆ ಬಂದರೆ ಮಕ್ಕಳೆಲ್ಲರು ಎದ್ದು ನಿಲ್ಲುತ್ತಿದ್ದರು, ಇವರು ಯಾವ ಮಕ್ಕಳನ್ನು ಗದರಿಸಿದವರಲ್ಲ, ಹೊಡೆದವರಲ್ಲ, ಗಂಭೀರ ಪ್ರಸನ್ನಮುಖಿ, ತಾಯಿಯೊಂದಿಗೆ ತೀರಾ ಸಲಿಗೆಯಿಂದಿದ್ದರು.

ಲೇಖಕಿಯ ಬಾಲ್ಯದ ದಿನದ ಕುಂದಾಪುರದ ರಸ್ತೆಗಳೆಂದರೆ ವಾಹನಗಳಿಂದ ಕಿಕ್ಕಿರದೆ ನಡೆದಾಡುವವರು ನಿಧಾನ ಓಲಾಡಿಕೊಂಡು ಪರಿಚಿತರು ಸಿಕ್ಕಿದರೆ ಒಂದು ಕ್ಷಣನಿಂತು ಮಾತಾಡಿ ಮುಂದುವರೆಯಲು ಬಿಡುವ ರಸ್ತೆಗಳು. ಸ್ವಂತ ಕಾರು, ಮನೆ ಎಲ್ಲೋ ಕೆಲವರಿಗೆ ಕಸೂತಿ, ಹೊಲಿಗೆ

ಇತ್ಯಾದಿಗಳಲ್ಲಿ ಹೆಂಗಸರು ವಿರಾಮ ಕಳೆಯುವರು. ಒಟ್ಟಿನಲ್ಲಿ ಅವಸರವಿಲ್ಲದ, ವಿರಾಮದ, ಯಾವುದೂ ವಿಪರೀತವೆಂಬುದು ಯಾರಲ್ಲೂ ಇಲ್ಲದ ಕಾಲ. ಆಗೆಲ್ಲ 'ಫಾರ್ವರ್ಡ್' ಒಂದು ಶಬ್ಧ ಇತ್ತು. ಸ್ವಲ್ಪ ಫ್ಯಾಶನ್ ಮಾಡುತ್ತಿದ್ದ ಹೆಂಗಸರೆಲ್ಲ ಆಗ ಆ ಹೆಸರಿನ ವಲಯದೊಳಗಿದ್ದರು. ಆದರೆ ಅವರು ವೇಶಭೂಷಣದಲ್ಲಿ ಮಾತ್ರ ಹಾಗಿದ್ದರು ಆದರೆ ಧೈರ್ಯವೆಂಬುದಿರಲಿಲ್ಲ. ಲೇಖಕಿ ತನ್ನ ಸುತ್ತಲಿನ ಪರಿಸರದೊಂದಿಗೆ ತಾನೂ ಒಂದಾಗಿ ಬೆಳೆದರು. ಬಾಲ ವಿಧವೆಯರು, ಮಂಕಾದವರು, ಹುಚ್ಚರು, ಸಿಡುಕಿಯರು, ಬಸುರಿಯಾದ ಗಂಡ ಸತ್ತ ಮುಂಡೆಯರು, ವೇಶ್ಯೆಯರು, ಬಡತನದಲ್ಲಿ ಸಿರಿತನದಿಂದ ಬದುಕುತ್ತಿದ್ದವರು. ದಾರಿದ್ರ್ಯದ ಪರಾಕಾಷ್ಠೆಯವರು, ಶ್ರೀಮಂತಿಕೆಯ 'ಪಾಳೆಗಾರಿಕೆ'ಯವರು, ಪ್ರಕ್ಷಿಪ್ತರು, ಎಲ್ಲವೂ ಎಲ್ಲರೂ ಹಪ್ಪಳ ಸೆಂಡಿಗೆ ಉಪ್ಪಿನಕಾಯಿ, ಅಡುಗೆ ಇತ್ಯಾದಿ ಕೆಲಸಗಳ ನಡುವೆಯೇ ವಿಮರ್ಶೆ ಎಂಬ ಶಬ್ಧಕ್ಕೆ ಒಳಪಡದೆಯೆ ನಿತ್ಯ ವಿಮರ್ಶೆಗೊಳಗಾಗುತ್ತಿದ್ದರು. ಅದಕ್ಕಾಗಿ ಪ್ರತ್ಯೇಕ ಒಂದು ಖಾಲಿಸಮಯ ಎಂಬುದೇ ಇರಲಿಲ್ಲ. ಯೋಜನೆಗಳನ್ನು ಅಂದಂದಿನ ಕಾಲಕ್ಕೆ ತಕ್ಕಂತೆ ಮುಟ್ಟಿಸಲು ಹೆಣಗಾಡುತ್ತಿದ್ದ ಮಾತಿನ ಸಸೆತಗಳು ಅವೆಲ್ಲ. ಬೇಕೋ ಬೇಡವೋ ಪ್ರಶ್ನೆಯೇ ಇಲ್ಲದೆ ಕಿವಿತುಂಬುತ್ತಿದ್ದ ಕಣ್ಣು ಒಳಸೇರಿಕೊಳ್ಳುತ್ತಿದ್ದ ಸುದ್ದಿ-ಸುಲೇಖಗಳು, ದೃಶ್ಯಗಳು, ಟೆಂಟ್ ಸಿನಿಮಾ ನೋಡುನೋಡುತ್ತಿದ್ದಂತೆ, ಅದು ಹೋಗಿ ಮನೆಯೆದುರೆ ಸಿನಿಮಾ ಥಿಯೇಟರ್. ಎಲ್ಲೊ ಒಮ್ಮೆಮ್ಮೆ ಇಣುಕಿದ ಒಂದೆರಡು ನಾಟಕ ಕಂಪೆನಿಗಳು. ದೂರ ನರಿಬೇಣದಲ್ಲಿ ಬೀಡು ಬಿಡುವ ಗೋಸಾಯಿಗಳು, ಎಲ್ಲ ನೆನಪು ನೆನಪು ನೆನಪಿನ ಒಡಲು ಬಗೆದು ಹೊರಟ ಎಳೆಗಳೆ ಕಥೆಗಳಾದವೇನೊ ಎಂದೆನಿಸುತ್ತದೆ.

ವೈದೇಹಿಯವರ ಅಣ್ಣಂದಿರೂ ಹಾಗೂ ತಮ್ಮನೂ ಒಂದು ಘಟನೆಯನ್ನು ವಿವರಿಸುವುದಾಗಲಿ, ವಿಶ್ಲೇಷಿಸುವುದಾಗಲೀ ಅದರಲ್ಲೊಂದು ಅದರದೇ ನೋಟ ಮತ್ತು ವಿಸ್ತಾರ. ಇವರ ಅಣ್ಣ ಎ.ಎಸ್.ಎನ್. ಹೆಬ್ಬಾರ್ ಮೊದಲೆಲ್ಲ ತುಂಬ ಬರೆಯುತ್ತಿದ್ದರು. ಅವರ ಒಂದು ಕಥೆಗೆ ಹಿಂದೆ ಪ್ರಜಾವಾಣಿ ಕಥಾಸ್ಪರ್ಧೆಯಲ್ಲಿ ಬಹುಮಾನ ಬಂದಿತ್ತು. ಕನ್ನಡ ಸಂಘ ಇತ್ಯಾದಿ ಸಂಘಟಿಸಿ, ಮನೆಯಲ್ಲಿಯೇ ನೇರವಾಗಿ ಹೊಸಕಾಲದ ಬರವಣಿಗೆಗೆ ಹೊರಟ ಮೊದಲಿಗರಾಗಿದ್ದಾರೆ. ವೈದೇಹಿಯವರು ಬರವಣಿಗೆಗೆ ತೊಡಗುವಲ್ಲಿ ಅವರ ಪಾತ್ರ ಪ್ರಮುಖವಾದದ್ದಾಗಿದೆ.

ವೈದೇಹಿಯವರ ಪತಿ ಶ್ರೀನಿವಾಸಮೂರ್ತಿಯವರಿಗೆ ಸಾಹಿತ್ಯ ಮಾತ್ರವಲ್ಲ ಸಂಗೀತ ಕೂಡ ಮೆಚ್ಚಿನದು, ಮದುವೆಯಾಗಿ ಬಂದದ್ದೇ ಸಾಹಿತ್ಯ, ಸಂಗೀತದ ಪ್ರಭಾವವಿರುವ ಶಿವಮೊಗ್ಗಕ್ಕೆ, ಅದೂ ಎಪ್ಪತ್ತರ ದಶಕದ ಹತ್ತಿರಹತ್ತಿರ ನೋಡುನೋಡುವುದರೊಳಗಾಗಿ ಎಪ್ಪತ್ತರ ದಶಕಬಂದಾಯಿತು. ಶಿವರಾಮಕಾರಂತರ

ಜೊತೆಗೆ ನವ್ಯ ಬರಹಗಳು, ಲಂಕೇಶ್, ಅನಂತಮೂರ್ತಿ, ತ್ರಿವೇಣಿ, ಅನುಪಮಾ ನಂತರ ಬಂದ ವೀಣಾ ಶಾಂತೇಶ್ವರ, ಹೊಸ ನಾಟಕಗಳು ನಿನಾಸಂನಿಂದ ಶಿವಮೊಗ್ಗಕ್ಕೆ ಬರತೊಡಗಿದ್ದು ಆಗಲೇ. ಶಿವಮೊಗ್ಗದಲ್ಲಿ ಸಾಹಿತ್ಯ ಸಮ್ಮೇಳನದ ಸಿದ್ಧತೆಯ ಸಮಯದಲ್ಲಿ ಸುಬ್ಬಣ್ಣನವರ ಬೇಟಿ, ಲೇಖಕಿಯ ಪ್ರಥಮ ಸಂಕಲನದ ಪ್ರಕಟಣೆ, ಹೆಗ್ಗೋಡಿನ ಸಿನಿಮಾ ರಸಗ್ರಹಣ ಶಿಬಿರಗಳು ಇವರ ಬದುಕನ್ನೇ ಬದಲಿಸಿ ಬರಹದಲ್ಲಿ ತೊಡಗುವಂತೆ ಮಾಡಿತು.

# ಕಥೆಗಳಲ್ಲಿ 'ಕುಂದಾಪ್ರಕನ್ನಡ'ದ ಬಳಕೆ

ಭಾಷೆ ನಮ್ಮೊಡನೆ ಇದೆ. ನಮಗೆ ಗೊತ್ತಿರುವ ಕೆಲವು ಭಾಷೆಗಳಿವೆ. ನಮಗೆ ಗೊತ್ತಿಲ್ಲದ ಸಾವಿರಾರು ಭಾಷೆಗಳಿವೆ. ಮಾನವ ಜನಾಂಗ ಹೀಗೆ ಹಲವು ಭಾಷಾ ಸಮುದಾಯಗಳ ಸಂಯೋಜನೆಯಾಗಿದೆ. ಕೆಲವು ಭಾಷೆಗಳನ್ನು ಆಡುವ ಕೋಟಿಗಟ್ಟಲೆ ಜನರಿದ್ದಾರೆ. ವಿಶ್ವದ ಬಹುಭಾಗಗಳಲ್ಲಿ ಅಂಥ ಭಾಷೆಗಳ ನುಡಿಕೇಳಿಸುತ್ತದೆ. ಮತ್ತೆ ಕೆಲವು ಭಾಷೆಗಳನ್ನು ಆಡುವವರ ಸಂಖ್ಯೆ ಒಂದು ನೂರನ್ನು ದಾಟುವುದಿಲ್ಲ. ಅವರು ಕೆಲವು ಚದರ ಮೈಲಿ ಪ್ರದೇಶದಾಚೆಗಿನ ಜಗತ್ತನ್ನೇ ಕಂಡಿಲ್ಲ. ಆ ಭಾಷೆ ಇನ್ನೆಷ್ಟು ಸಾವಿರ ವರ್ಷಕಳೆದರೂ ದೂರದ ನಾಡುಗಳಿಗೆ ತಲುಪಲಾರದು. ದಿನಗಳೆದಂತೆ ಆ ಭಾಷಿಕರೊಡನೆ ಆ ಭಾಷೆಯು ಅಳಿಯುವ ಸಾಧ್ಯತೆ ಇದೆ. ಕೆಲವು ಭಾಷೆಗಳು ಎಲ್ಲ ವಲಯಗಳಲ್ಲಿ ಸಮೃದ್ಧವಾಗಿ ಬಳಕೆಯಾಗುತ್ತವೆ. ಆ ಭಾಷೆಯೊಡನೆ ಸಾಮಾಜಿಕ ಅಂತಸ್ತು ನಂಟು ಬೆಳೆಸಿರುತ್ತದೆ. ಮತ್ತೆ ಕೆಲವು ಭಾಷೆಗಳು ಪಿಸುಗುಡುವ ಭಾಷೆಗಳು, ಅಷ್ಟಿಷ್ಟು ಕಡೆ ಹೇಗೋ ಬಳಕೆಯಾಗಿ ಜೀವ ಹಿಡಿದುಕೊಂಡಿವೆ.

ಮಾನವನು ರೂಢಿಸಿಕೊಂಡಿರುವ ಅನೇಕ ವಿಸ್ಮಯಗಳಲ್ಲಿ ಭಾಷೆಯೂ ಒಂದು. ಆದರೆ ಇದೊಂದು ಸಿದ್ಧವಸ್ತುವಿನಂತೆ ರೂಪುಗೊಂಡದ್ದಲ್ಲ. ಮೊದಲು ಸನ್ನೆಯೇ ಭಾಷೆ. ಬಾ ಎಂದು ಕರೆಯುವುದು, ಕಾಲೆತ್ತಿ ತುಳಿದಂತೆ ಮಾಡುವುದು, ಕಣ್ಣು ಮಿಟುಕಿಸುವುದು ಇತ್ಯಾದಿ. ಆನಂತರ ಸೀಮಿತವಾದ, ಸ್ಖಾಲಿತ್ಯದ ಧ್ವನಿ ಕಾಲಕ್ರಮೇಣ ಧ್ವನಿವಿಕಾಸದಿಂದ ಖಚಿತಗೊಂಡ ಭಾಷೆಯ ಪೂರ್ವರೂಪ. ಉದಾಹರಣೆ ನೋವಾದಾಗ ಚೀರುವುದು, ಪ್ರಾಣಿಪಕ್ಷಿಗಳ ಕೂಗುಗಳ ಅನುಕರಣೆ ಇಂತಹವು. ಇಂತಹ ಧ್ವನಿ ಸಮೂಹದ ಪದಗಳಿಗೆ ಅದನ್ನು ಆಡುವವರೇ ಕಲ್ಪಿಸಿಕೊಂಡ ಅರ್ಥ ಇತ್ತು. ಇದರಿಂದಾಗಿ ಒಂದು ಪ್ರದೇಶದ ಜನರ ಧ್ವನಿಸಮೂಹ ಇನ್ನೊಂದು ಪ್ರದೇಶದವರಿದ್ದಂತೆಯೇ ಇದ್ದರೂ ಅರ್ಥ ಮಾತ್ರ ಬೇರೆ ಬೇರೆಯಾಗಿ ಇರುತ್ತಿತ್ತು. ಅಲ್ಲದೆ ಧ್ವನಿ ಸಂಕೇತಗಳ ಜೋಡಣೆಯಲ್ಲೂ ವ್ಯತ್ಯಾಸ ಇರುತ್ತಿತ್ತು. ಹೀಗಾಗಿ ಮತ್ತೊಂದು ಭಾಷೆಯನ್ನಾಡುವವರ ಧ್ವನಿ ವಿಚಿತ್ರವಾಗಿ ಕೇಳಿಸಬಹುದಲ್ಲದೆ ಅರ್ಥವೇ ಆಗದೆ ಹೋಗುತ್ತಿತ್ತು. ಆದ್ದರಿಂದ ಈ ಧ್ವನಿಸಂಕೇತ ಅಥವಾ ಅದರ ರೂಢಿಯ ಹೆಸರು ಭಾಷೆ ಬೇರೆ ಬೇರೆ ಆಗುತ್ತಾ ಹೋಯಿತು, ಸಂಪರ್ಕ ಸಾಧನ ಇಲ್ಲದುದು, ನದಿ ಪರ್ವತಗಳು ಅಡ್ಡವಾಗಿ ಇದ್ದುದು, ಆಳುವವರು ವೈರಿಗಳಾಗಿದ್ದುದು, ಜಾತಿ–ಮತ ವೈಶಮ್ಯಗಳಿಂದ ಬೆರೆಯಲಾಗದುದು ಭಾಷೆಗಳ ನಡುವಣ ವೈದೃಶ್ಯಕ್ಕೆ ಕಾರಣ ಎನ್ನಬಹುದು. ಬೇರೆ ಬೇರೆ ಭಾಷೆಗಳ ನಡುವೆ ಒಂದಷ್ಟೂ ಅರ್ಥಮಾಡಿಕೊಳ್ಳಲಾಗದ ವ್ಯತ್ಯಾಸ ಇದ್ದರೆ, ಒಂದು ಭಾಷೆಯ ಉಪಭಾಷೆಗಳ ನಡುವೆ ಸಮಾನತೆ – ಸಾದೃಶ್ಯಗಳು ಬಹಳವಾಗಿ ಇರುತ್ತದೆ.

ಈ ಭಾಷೆಯು ಕೇಳಲು ಸುಂದರ, ಇದು ಗಂಡು ಭಾಷೆ, ಇದು ಸಂಗೀತದಂತೆ ನಾದಶೀಲತೆ ಇದೆ ಇದಕ್ಕೆ, ಅಬ್ಬ, ಎಷ್ಟೊಂದು ಒರಟು ಭಾಷೆ ಇದು - ಹೀಗೆ ಭಾಷೆಗಳಿಗೂ ಬೆಲೆಕಟ್ಟುವುದಿದೆ. ಆದರೆ ಈ ಮೌಲ್ವೀಕರಣ ಮಾಡುವುದಿದ್ದರೆ ಆ ಭಾಷೆಯನ್ನು ಬಳಸುವ ವ್ಯಕ್ತಿಗಳ ವ್ಯಕ್ತಿತ್ವ ಮನೋಭಾವಗಳನ್ನು ಆಧಾರವಾಗಿಟ್ಟುಕೊಂಡರೆ ಸರಿ ಆದೀತು. ಒಂದು ಸಣ್ಣ ಪರಿಮಿತಿಯಲ್ಲಿ ಅಕ್ಷರ ಗುಣ, ರೀತಿ, ಪುರುಷ ಧ್ವನಿ ಸಂಕೇತ ಇತ್ಯಾದಿಗಳೂ ಕಾರಣವಾಗಬಹುದು. ಅಲ್ಲದೆ ಮಾತಾಡುವವರ ರಾಗ, ಶಬ್ದವನ್ನು ಕಿರಿದುಗೊಳುಸುವ ಬಗೆ, ಧ್ವನಿಸಂಕೇತಗಳ ಸಂಯೋಜನೆ ಶಬ್ದಸ್ವರೂಪ ಮೊದಲಾದವು ಭಾಷೆಗಳ ನಡುವಣ ಅಂತರಕ್ಕೆ ಕಾರಣವೂ ಆಗುತ್ತದೆ. ಇದು ಒಂದು ಭಾಷೆಯೊಳಗಣ ಉಪಭಾಷೆಗಳಲ್ಲೂ ತೋರಿಬರುತ್ತದೆ. ಕನ್ನಡವನ್ನೇ ಗಮನಿಸಿದರೆ ಇದರಲ್ಲಿ ಧಾರವಾಡ ಕನ್ನಡ, ಮಂಗಳೂರು ಕನ್ನಡ, ಚಾಮರಾಜನಗರ ಕನ್ನಡ, ಬೆಂಗಳೂರು ಕನ್ನಡ, ಕುಂದಾಪುರ ಕನ್ನಡವೆಂದು ಆಯಾ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಗಮನಿಸಿ ಪ್ರತ್ಯೇಕಿಸಲಾಗುತ್ತದೆ.

ಉಡುಪಿತಾಲ್ಲೂಕಿನ ಕಲ್ಯಾಣಪುರ ಹೊಳೆ (ಸ್ವರ್ಣಾನದಿ)ಯಿಂದ ಉತ್ತರಕ್ಕೆ ಸೀತಾನದಿಯವರೆಗಿನ ಕರಾವಳಿ ತೀರದ ಜನ ತುಳುವನ್ನು ಮಾತನಾಡುತ್ತಾರಾದ್ದರಿಂದ ಆ ಪ್ರದೇಶದ ಕನ್ನಡಿಗರಲ್ಲಿ ತುಳುಭಾಷೆಯ ಪ್ರಭಾವವನ್ನು ಕಾಣಬಹುದು. ದ್ವಿಭಾಷಾವಲಯದ ಈ ಜನರಲ್ಲಿ ಕುಂದಾಪುರ ಕನ್ನಡದ ಸೊಗಡು ವಿಶೇಷವಾಗಿ ಇದೆ. ಈ ಪ್ರದೇಶದಿಂದ ಪೂರ್ವಕ್ಕೆ ಪಶ್ಚಿಮ ಘಟ್ಟದ ಸೆರಗಿನವರೆಗೆ ಮತ್ತು ಸೀತಾನದಿಯಿಂದ ಉತ್ತರಕ್ಕೆ ಉಡುಪಿ ತಾಲ್ಲೂಕಿನ ಭಾಗ ಮತ್ತು ಇಡೀ ಕುಂದಾಪುರ ತಾಲ್ಲೂಕು ಪೂರ್ಣ ಅಂದರೆ ಕಡಲಿಂದ ಬೆಟ್ಟದ ಮಡಿಲಿನ ವರೆಗಿನ ಕನ್ನಡವೇ ಕುಂದಾಪುರ ಕನ್ನಡ ಅಥವಾ ಕುಂದಾಪ್ರ ಕನ್ನಡ ಅಥವಾ ಕೋಟ ಕನ್ನಡ.

ಇದನ್ನು ಕೋಟಕನ್ನಡವೆಂದು ಗುರುತಿಸಿದವರು ಬಯಲುಸೀಮೆಯ ಜನ. ಹಾಗೆ ಕರೆಯಿಸಿಕೊಳ್ಳಲು ಕಾರಣರಾದವರು ಇಲ್ಲಿಯ ಜನ. ಸಾಹಸಶೀಲರಾದ ಇವರು ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ ಹೋಟೆಲಿಟ್ಟು ಅನ್ಯರಿಗೆ ವಿಚಿತ್ರವೂ, ವಿಶಿಷ್ಟವೂ ಎನಿಸುವ ಇಲ್ಲಿಯ ಕನ್ನಡವನ್ನು ಪರಿಚಯಿಸಿದರು. ಕೋಟದವರು ಆಡುವ ಈ ಮಾತಿಗೆ ಅವರು ಕೋಟ ಕನ್ನಡವೆಂದು ಗುರುತಿಸಿದವರು. ಹೀಗೆ ಪರವೂರಿನವರಿಗೆ ಪರಿಚಿತವಾದ ಕೋಟಕನ್ನಡವು ಇಡೀ ಕುಂದಾಪುರ ತಾಲ್ಲೂಕನ್ನೇ, ಜಾತಿ–ಮತ–ಪಂಥ–ಪಂಗಡವೆಂಬ ಬೇಧವಿಲ್ಲದೆ ವ್ಯಾಪಿಸಿರುವುದರಿಂದ ಈಗೀಗ ಇದನ್ನು 'ಕುಂದಾಪ್ರ ಕನ್ನಡ'ವೆಂದೇ ಗುರುತಿಸಲಾಗುತ್ತಿದೆ.

ಒಂದು ಭಾಷೆಯ ಪ್ರಾದೇಶಿಕತೆಯ ಸೊಗಡು, ವೈಶಿಷ್ಟ್ಯ ತೆರೆದುಕೊಳ್ಳುವುದು ಶಬ್ದಸ್ವರೂಪದಲ್ಲಿ, ವಾಕ್ಯರಚನೆಯಲ್ಲಿ ಮತ್ತು ಆ ಭಾಷೆಗೇ ಮೀಸಲಾಗಿರುವ ಕಾಕುವಿನಲ್ಲಿ, ಪ್ರತ್ಯೇಕ ವೈಶಿಷ್ಟ್ಯದ ಈ

ಉಪಭಾಷೆಯು ಅದನ್ನು ಮಾತಾಡುವವರಿಗೆ ಬಲುಮೆಚ್ಚು, ಅದು ಇರಬೇಕಾದುದೂ ಅಗತ್ಯ. ಆದರೆ ಅದು ದುರಭಿಮಾನವಾಗಿ ಇನ್ನೊಂದು ಪ್ರದೇಶದ ಉಪಭಾಷೆಯನ್ನು ಕೇಳಲು ವಿಚಿತ್ರವೆನಿಸುತ್ತದೆ, ಅರ್ಥವಾಗುವುದಿಲ್ಲ ಎಂಬುದಕ್ಕಾಗಿ ಕಡೆಗಣಿಸುವುದು ಸರಿಯಲ್ಲ. ಒಂದು ಉಪಭಾಷೆಯು ಅಥವಾ ಪ್ರಾದೇಶಿಕಭಾಷೆಯು ಇತರ ಕಡೆಯ ಉಪಭಾಷೆಗಿಂತ ಸಶಕ್ತ ಹಾಗೂ ಮೂಲ ಕನ್ನಡಕ್ಕೆ ಹತ್ತಿರವಾದದ್ದು ಎಂದಾಗಬೇಕಾದರೆ ಅದರದೇ ಆದ ಕೆಲವು ಲಕ್ಷಣಗಳಿರಬೇಕು. ಅವುಗಳ ಆಧಾರದ ಮೇಲೆ ಭಾಷಾವಿಜ್ಞಾನಿಗಳು ಕುಂದಾಪ್ರ ಕನ್ನಡವನ್ನು ಕನ್ನಡದ ಸಶಕ್ತ ಉಪಭಾಷೆ ಎಂದು ಗುರುತಿಸಿದ್ದಾರೆ. ಡಿ.ಎನ್.ಶಂಕರಭಟ್ಟರು 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ' ಎಂಬ ಪುಸ್ತಕದಲ್ಲಿ ಕರಾವಳಿ ಕನ್ನಡದ ಕುರಿತು ಕರಾವಳಿ ಕನ್ನಡ, ಹವ್ಯಕ, ಕೋಟ, ಹಾಲಕ್ಕಿ ಮುಂತಾದ ಕನ್ನಡಗಳು ಸಂಸ್ಕೃತಕ್ಕೆ ಋಣಿಯಾಗಿರದ ಮೂಲಕನ್ನಡದ ಕವಲುಗಳು ಎಂದಿದ್ದಾರೆ. ಈ ಭಾಗದಲ್ಲಿ ಬೇರೆ ಭಾಷೆಯನ್ನಾಡುವ ಗಡಿಪ್ರದೇಶಗಳಿಲ್ಲಿಲ್ಲ. ಉತ್ತರ ಮತ್ತು ಪೂರ್ವದಲ್ಲಿ ಬೆಟ್ಟ, ಪಶ್ಚಿಮದಲ್ಲಿ ಕಡಲು, ಧಕ್ಷಿಣದಲ್ಲಿ ದ್ರಾವಿಡಭಾಷೆಯ ಕವಲಾದ ತುಳು ಇವನ್ನೇ ಮೇರೆಯಾಗಿ ಹೊಂದಿರುವ ಈ ಕುಂಧಾಪುರ ಕನ್ನಡಕ್ಕೆ ಅನ್ಯಭಾಷೆಯ ಕೊಳ್ಳುವಿಕೆಯ ಪ್ರಸಂಗವೇ ಎದುರಾಗಲಿಲ್ಲ. ಗ್ರಾಂಥಿಕ ಭಾಷೆಯ ಅಥವಾ ಪತ್ರಿಕಾಭಾಷೆಯ ಪ್ರಭಾವವೂ ಗ್ರಾಮೀಣ ಪ್ರದೇಶವೇ ಇಲ್ಲಿ ಹೆಚ್ಚಾಗಿದ್ದುದರಿಂದ ಇಲ್ಲಿಯ ಜನರ ಮೇಲೆ ವಿಶೇಷವಾಗಿ ಆಗಿರಲಿಲ್ಲ. ಹೀಗಾಗಿ ಅನ್ಯಭಾಷೆಯ ಪದಗಳ ಕೊಳ್ಳುವಿಕೆ ಇಂದಿನ ಸಂವಹನ ಮಾಧ್ಯಮದ ಸೀಮಿತ ಬಳಕೆಯಿಂದಾಗಿ ಹೊಸ ಹೊಸ ಪದಗಳ ಸ್ವೀಕಾರ, ಸಾಹಸಿಗರಲ್ಲದ ಸಾಮಾನ್ಯಜನರಿಂದಾಗಿ ನೂತನ ಶಬ್ಧಗಳ ಸೃಷ್ಟಿ, ಇಲ್ಲಿ ಇಲ್ಲವಾದ್ದರಿಂದ ಒಂದು ರೀತಿಯಲ್ಲಿ 'ಮಡಿವಂತ' ಭಾಷೆ ಇಲ್ಲಿಯದಾಗಿದೆ ಎಂದರೆ ಅತಿಶಯೋಕ್ತಿಯಲ್ಲ.

ಕುಂದಾಪ್ರ ಕನ್ನಡದಲ್ಲಿ ನೂರಾರು ಹಳಗನ್ನಡ ನಡುಗನ್ನಡದ ಪದಗಳು ಯಥಾವತ್ತಾಗಿ ಅಥವಾ ಸ್ವಲ್ಪ ರೂಪು ಕೆಡಿಸಿಕೊಂಡು ಉಳಿದುಕೊಂಡು ಬಂದಿದೆ. ಸಾರ್ಚು ಪದ ಇಲ್ಲಿ ಸಾಂಚು, ಚಾಚು ಎಂಬುದು ಚಾಂಚು ಎಂದಾಗಿದೆ. ಅಲುಂಬು ಅಲುಬು ಎಂದಾಗಿದೆ. ಅಬ್ಬೆ ಅಬಾ ಎಂದಾಗಿದೆ. ಇದರಂತೆ ಕೆಯ್, ಕೂಳು, ಮುಸುಡು, ನೊಸಲು, ಮೊಗೆ, ದಾಂಟು, ತಿಂಗಳ್, ನೇಸರ್, ಪಡು ಮೊದಲಾದ ಶಬ್ಧಗಳು ಧಾರಾಳವಾಗಿ ಬಳಕೆಯಲ್ಲಿವೆ. ಕುಂದಾಪುರದ ಬಂದರಿನ ಉಪಯೋಗ ಪಡೆದ ಮುಸಲ್ಮಾನರ, ಪೋರ್ಚುಗೀಸರ ಪ್ರಭಾವದಿಂದ ಕೆಲವು ಅನ್ಯಭಾಷೆಯ ಪದಗಳೂ ಸೇರಿಕೊಂಡಿವೆ. ಉದಾಹರಣೆಗೆ ಲಾಟಾನು, ಬರ್ಕತ್ತು, ಹರ್ಕತ್ತು, ಲಾಯ್ಕು ಇತ್ಯಾದಿ. ಈಗೀಗ ಇಂಗ್ಲೀಷ್ ಪದಗಳೂ ತದ್ಭವವಾಗಿಯೋ, ಹಾಗೆಯೇ ಸೇರಿಕೊಂಡಿವೆ. ಉದಾಹರಣೆಗೆ ಮಾಸ್ಟರ್>ಮಾಸ್ಟ್ರು, ಡಾಕ್ಟರ್>ಡಾಕ್ಟ್ರು, ಬೂಕು>ಬುಕ್ ಇತ್ಯಾದಿ.

ಮೂಲದ್ರಾವಿಡ ಭಾಷೆಯಿಂದ ಬೇರೆಯಾಗಿ ಬೆಳೆದುಬಂದ ಕನ್ನಡ ತುಳುಗಳಲ್ಲಿ ಸಮಾನಶಬ್ಧಗಳೆಷ್ಟೋ ಇವೆ. ಹಾಗೇ ನೋಡಿದರೆ ಕುಂದಾಪ್ರ ಕನ್ನಡ ಮತ್ತು ತುಳು ಸೋದರಸಂಬಂಧಿ ಭಾಷೆಗಳೆ ಆಗಿವೆ ಎಂದು ಹೇಳುವಷ್ಟು ಸಾಮ್ಯ ಇವುಗಳಲ್ಲಿದೆ, ಆದ್ದರಿಂದಲೇ ಕುಂದಾಪ್ರಕನ್ನಡವು ತುಳುವಿನಿಂದ ಬೇರ್ಪಟ್ಟ ಭಾಷೆಯೆಂದು ಹೇಳುವವರೂ ಇದ್ದಾರೆ. ಆದರೆ ಕ್ರಿಯಾಪದಗಳು, ಸಂಖ್ಯಾವಾಚಿಗಳು, ಸರ್ವನಾಮಗಳು ಭಾಷೆಯ ಸೋದರತ್ವವನ್ನು ನಿರ್ಣಯಿಸುತ್ತವೆ ಎಂಬ ಹಿನ್ನೆಲೆಯಲ್ಲಿ ಕುಂದಾಪ್ರ ಕನ್ನಡವು ಕನ್ನಡದ ಉಪಭಾಷೆಯಾಗಿದೆ ಎಂದು ಖಚಿತವಾಗಿ ಹೇಳಬಹುದು. ಅಂತೆಯೇ ಕುಂದಾಪ್ರ ಕನ್ನಡವನ್ನಾಡುವ ಯಾವುದೇ ಪ್ರದೇಶದಲ್ಲಿ ತುಳುವಿನ ಸಂಸ್ಕೃತಿ, ಧಾರ್ಮಿಕ ಆಚರಣೆ, ಜಾನಪದ-ಕಲೆ-ಆರಾಧನೆ ಯಾವುದೂ ಇಲ್ಲವಾದುದರಿಂದ ಮೊದಲು ತುಳು ನಾಡು ಆಗಿದ್ದು ಕುಂದಾಪುರ ತಾಲ್ಲೂಕಿನಾದ್ಯಂತ ತುಳು ಪ್ರಭಾವದ ಕನ್ನಡ ಉಳಿಯಿತು ಎಂಬ ಮಾತಿಗೆ ಆಧಾರ ಇಲ್ಲದೇ ಇರುವುದರಿಂದ ತುಳು ಕನ್ನಡದಿಂದ ಬೇರೆಯಾದ ಭಾಷೆ ಎಂಬ ಅಭಿಪ್ರಾಯ ಇರುವಾಗ ಕುಂದಾಪ್ರ ಕನ್ನಡಕ್ಕೆ ಕನ್ನಡವೇ ಮೂಲ ಎಂದು ಹೇಳುವುದು ಹೆಚ್ಚು ಸುಸಂಗತ.

ಕುಂದಾಪ್ರ ಕನ್ನಡವನ್ನು ಗ್ರಂಥಸ್ಥಗೊಳಿಸುವ ಸಾಹಸವನ್ನು ಕೈಗೊಂಡವರು ಯಾರೂ ಇಲ್ಲ. 'ಕುಸುಮಬಾಲೆ' 'ಗ್ರಾಮಾಯಣ'ಗಳ ಹಾಗೆ ಇಡೀ ಕೃತಿ ಇಲ್ಲಿಯ ಪ್ರಾದೇಶಿಕ ಭಾಷೆಯಲ್ಲಿ ಬಂದಿಲ್ಲ. ಹಲವಾರು ಕ್ಷೇತ್ರಗಳಲ್ಲಿ ಅಸಮಾನ್ಯ ಸಾಹಸಗೈದಿರುವ ಕಾರಂತರೂ ಇಲ್ಲಿಯ ಕನ್ನಡದಲ್ಲಿ ಸಮಗ್ರ ಕೃತಿ ರಚಿಸಿಲ್ಲ. ಆದರೆ ಅಲ್ಪಸ್ವಲ್ಪವಾಗಿ, ಪ್ರಾದೇಶಿಕಥೆಯನ್ನು ಪಡಿಮೂಡಿಸುವುದಕ್ಕಾಗಿ ಸಂಭಾಷಣೆಯಲ್ಲಿ ತಂದದ್ದಿದೆ. ಈ ಬಗ್ಗೆ ಕಾರಂತರನ್ನೇ ಕೇಳಿದಾಗ ಅವರು "ನಾನು ಬರೆಯುವುದು ಎಲ್ಲರೂ ಓದಲೆಂದು. ಇಲ್ಲಿಯ ಕನ್ನಡದಲ್ಲಿ ಬರೆದರೆ ಯಾರಿಗೂ ಅರ್ಥವಾಗದು. ಅರ್ಥವಾಗುವುದಿರಲಿ ಓದಲೂ ಆಗಲಿಕ್ಕಿಲ್ಲ" ಎಂದಿದ್ದಾರೆ. ವೈದೇಹಿಯವರು, ಮಿತ್ರ ವೆಂಕಟರಾಜರವರು ಕೆಲವು ಕಥೆಗಳನ್ನು ಕುಂದಾಪುರ ಕನ್ನಡದಲ್ಲಿ ಬರೆದು ಈ ಭಾಷೆಗೊಂದು ಮನ್ನಣೆ ತೋರಿದರು. ವೈವಿಧ್ಯ ಇರಲಿ ಎಂದೋ, ಚಪ್ಪಾಳೆ ಗಿಟ್ಟಿಸಲು ಎಂದೋ ಕೆಲವರು ವೇದಿಕೆಯಲ್ಲಿ ಸಾರ್ವಜನಿಕವಾಗಿ ಮಾತಾಡುತ್ತಿದ್ದುದೂ ಉಂಟು. ಇನ್ನು ಚಲನಚಿತ್ರದಲ್ಲಿ ದೂರದರ್ಶನ ದಾರವಾಹಿಯಲ್ಲಿ ಕೆಲವೊಮ್ಮೆ ಹಾಸ್ಯಾಸ್ಪದವಾಗಿಯು ಕುಂದಾಪ್ರ ಕನ್ನಡವನ್ನು ಆಡುತ್ತಿರುವುದು ಉಂಟು. ಇವಿಷ್ಟನ್ನು ಬಿಟ್ಟರೆ ಇದು ಕುಂದಾಪುರ ತಾಲ್ಲೂಕಿನಾದ್ಯಂತ ಗ್ರಾಮೀಣ ಪ್ರದೇಶದ ಆಡುಭಾಷೆಯಾಗಿಯೇ ಉಳಿದಿದೆ. ಇಲ್ಲಿಯ ಪೇಟೆ ಪ್ರದೇಶದ ಜನರು ಗ್ರಾಮ್ಯಭಾಷೆಯನ್ನಾಡದೆ ನಾಗರೀಕರ ಭಾಷೆಯನ್ನೇ ಆಡುತ್ತಾರೆ. ಪೇಟೆ ಪರಿಸರವನ್ನು ಬಿಟ್ಟು ಹಳ್ಳಿಗಳ ಒಳ ಒಳಗೆ ಹೋದಂತೆ ಈ ಭಾಷೆ ಹೆಚ್ಚು

ಸಂಕೀರ್ಣವಾಗುತ್ತಾ ಹೋಗುತ್ತದೆ. ಸ್ಥಳಸ್ಥಳದಲ್ಲಿ, ಜಾತಿ ಜಾತಿಗಳಲ್ಲಿ ಪದ ಬೇರೆ ಬೇರೆ ರೂಪಗಳನ್ನು ಪಡೆಯುತ್ತದೆ ಎನ್ನಬಹುದು.

ದೈನಂದಿನ ಭಾಷಾ ವ್ಯವಹಾರದಲ್ಲಿ ಎಲ್ಲಾ ಭಾಷೆಗಳಲ್ಲೂ ಕಾಣಿಸುವ ಸಾಮಾನ್ಯ ಸಂಗತಿ ಮಿತವ್ಯಯಾಸಕ್ತಿ, ವರ್ಣಪಲ್ಲಟ, ಸ್ವರವ್ಯತ್ಯಾಸ, ರೂಪಾಂತರ ಮೊದಲಾದವು ಕುಂದಾಪ್ರ ಕನ್ನಡದಲ್ಲೂ ಉಂಟು. ಇಲ್ಲಿಯ ಜನ ಬದುಕಿನಲ್ಲಿ ಹೇಗೋ ಹಾಗೆಯೇ ಮಾತನಾಡುವ ಸಂದರ್ಭದಲ್ಲೂ ತುಂಬಾ ತುಂಬಾ ಮಿತವ್ಯಯಾಸಕ್ತಿಯವರು. ಶಬ್ಧವನ್ನು ಮುರಿದು ಅಕ್ಷರದೊಳಗೆ ಸೇರಿಸಿ ಕೇಳಕೇಳುತ್ತಿದ್ದಂತೆ ವಾಕ್ಯ ಮುಗಿಸಿ ಬಿಡುತ್ತಾರೆ.

'ಹೆಣ್ಣೇ, ಆ ಗೊರಬನ್ನು ಈ ಕಡೆ ತೆಗೆದುಕೊಂಡು ಬಾ' ಎಂಬುದು ಇಲ್ಲಿಯ ಜನರ ಬಾಯಲ್ಲಿ 'ಹೆಣ, ಗೊರ್ಬಿತ್ತಬ' ಎಂದಾಗುತ್ತದೆ, 'ಬರೆದುಕೊಂಡು ಬರಬೇಕೇ ಸಾರ್' ಎಂಬುದು ಮಕ್ಕಳ ಬಾಯಲ್ಲಿ 'ಬರ್ಕ ಬರ್ಕಸಾ' ಎಂದಾಗುತ್ತದೆ. 'ಅವನ ಹತ್ತಿರ ಕೇಳಬೇಕೇನು' ಎಂಬುದು 'ಅವ್ನ ಹೊಕ್ಡ ಕೇಣ್ಕೇನ್' ಎಂದಾಗುತ್ತದೆ. 'ಇಲ್ಲಿ ನೋಡಿ, ಕುಳಿತುಕೊಳ್ಳಿ ಅಂದ ಕೂಡಲೆ ಹಾಯಾಗಿ ಕುಳಿತುಕೊಳ್ಳಬೇಕು' ಎಂಬುದು 'ಇಗಣಿ, ಕೊಕಣಿ ಅಂದ್ಕೊಡ್ಲೆ ಹಯ್ಯಂಗ್ ಕೊಕಣ್ಕ್' ಎಂದಾಗುತ್ತದೆ.

ಈ ಭಾಷೆಯ ಪರಿಚಯವೇ ಇಲ್ಲದವರಿಗೆ ಮೇಲಿನ ವಾಕ್ಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವೇ ಇಲ್ಲ. ಇದು ಈ ಭಾಷೆಗೆ ಮಾತ್ರ ಸೀಮಿತವಲ್ಲ. ಎಲ್ಲಾ ಕಡೆಯ ಗ್ರಾಮೀಣ ಆಡುನುಡಿಯ ಸಂಕೀರ್ಣತೆ ಇದೇ ಆಗಿದೆ. ಮಿತವ್ಯಯಾಸಕ್ತಿಯ ಫಲವಾಗಿ ಬಹುತೇಕ ಎಲ್ಲಾ ಪದಗಳು ಹ್ರಸ್ವರೂಪವನ್ನು ತಾಳುತ್ತವೆ. ಆ ಸಂದರ್ಭದಲ್ಲಿ ಸ್ವರದ ಉಚ್ಚಾರ ಅರ್ಧಸ್ವರದ ಮಟ್ಟಕ್ಕೆ ಬರುತ್ತದೆ. ಉದಾಹರಣೆಗೆ ಅಗಳು ಎಂಬುದು ಅಗ್ಳು, ಅರೆಯುವ ಕಲ್ಲು ಎಂಬುದು ಅರ್ಕಲ್ಲು, ದೇವರು ಎಂಬುದು ದೇವ್ರ್, ಮಾಡಬಾರದು ಎಂಬುದು ಮಾಡುಕಾಗ ಎಂದಾಗುತ್ತದೆ.

ವೈದೇಹಿಯವರ ಬಹುತೇಕ ಬರವಣಿಗೆಗಳು ಯಾವುದೋ ಒಂದು ಸಮುದಾಯದಲ್ಲಿ, ಸಂಸ್ಕೃತಿಯಲ್ಲಿ ಆಳವಾಗಿ ಬೇರು ಬಿಟ್ಟಿರುವಂತೆ ಕಾಣುತ್ತದೆ. ಅವುಗಳಿಂದ ಎದ್ದು ಬಂದಂತಹ ಪಾತ್ರಗಳು, ಅವುಗಳ ಭಾಷೆ – ನುಡಿಗಟ್ಟುಗಳಲ್ಲೇ ಮಾತನಾಡುತ್ತವೆ. 'ಅಕ್ಕು', 'ಅಮ್ಮಚ್ಚಿಯೆಂಬ ನೆನಪು', 'ವಾಣಿಮಾಯಿ', 'ಹಕ್ಕಿಲ್ಲದವರು', 'ಭೂತ', 'ಯಾತ್ರೆ' ಮುಂತಾದ ಕಥೆಗಳಲ್ಲಿ ಆಯಾ ಭಾಷೆ ಇಲ್ಲದೆ. ಆಯಾ ಪಾತ್ರಗಳೇ ಇಲ್ಲ, ಆಯಾ ಪಾತ್ರಗಳಿಲ್ಲದಿದ್ದರೆ, ಆಯಾ ಕಥೆಗಳೆ ಇಲ್ಲ ಎಂಬುವಷ್ಟು ಭಾವ, ಭಾಷೆ, ವ್ಯಕ್ತಿತ್ವಗಳು ಬೆರೆತು ಹೋಗಿವೆ.

**ಅಕ್ಕು:-**

ಅಕ್ಕುವಿಗೆ ಗಂಡನಿಲ್ಲ ಆದರೂ ಆಕೆ ಹಣೆಯಲ್ಲಿ ದೊಡ್ಡ ಕುಂಕುಮ ಇಟ್ಟುಕೊಳ್ಳುತ್ತಾಳೆ. ಕರಿಮಣಿ ಸರವನ್ನು ಹಾಕಿಕೊಳ್ಳುತ್ತಾಳೆ. ಕೆಲವೊಮ್ಮೆ ಕರಿಮಣಿಸರವನ್ನು ತೆಗೆದಿಟ್ಟು ಊರನ್ನು ಸುತ್ತುತ್ತಾಳೆ. ಅಕ್ಕು ನಿನ್ನ ಗಂಡ ಎಲ್ಲಿ?' ಎಂದು ಯಾರಾದರು ಕೇಳಿದರೆ ಅವರ ಗ್ರಹಚಾರ ಬಿಡಿಸುತ್ತಿದ್ದಳು. ಕೆಲವೊಮ್ಮೆ ನಾಚಿ ನಗುತ್ತಲೂ ಹೋಗುತ್ತಿದ್ದಳು. ಅಕ್ಕು ಯಾವಾಗಲೂ ಟುವಾಲನ್ನು ಇಟ್ಟುಕೊಂಡು ಕರವಸ್ತ್ರದ ರೀತಿ ಬಳಸುತ್ತಿದ್ದಳು. ಕೆಲವೊಮ್ಮೆ ಎಲ್ಲಿಯೋ ಇಟ್ಟು ಎಲ್ಲೊ ಹುಡುಕುತ್ತಿದ್ದಳು.

ಅಜ್ಜಯ್ಯನ ಮನೆಯಲ್ಲಿ ಯಾರೂ ಸ್ವತಂತ್ರರಲ್ಲ. ಸ್ವಲ್ಪ ಸ್ವರ ಇರುವುದಾದರೆ ವಾಸುಚಿಕ್ಕಪ್ಪಯ್ಯನಿಗೆ. ಮಾತಾಡಲು ಒಂಚೂರು ಧೈರ್ಯ ಮಾಡುವುದಾದರೆ ಅವನ ಹೆಂಡತಿ ಭಾನು ಚಿಕ್ಕಿ. ಯಾರಿಗೂ ಹೆದರದವರೆಂದರೆ ದೊಡ್ಡಜ್ಜನ ತಂಗಿ 'ದೊಡ್ಡತ್ತೆ'. ಎಲ್ಲರಿಗೂ ದೊಡ್ಡತ್ತೆ. ಯಾವ ನಿರ್ಬಂಧವೂ ಇಲ್ಲದಿರುವವಳೆಂದರೆ ಅಕ್ಕು. ಇವಳಿಗೆ ಊರಿನ ಮದುವೆ, ಉಪನಯನ ಇತರ ಸಮಾರಂಭಗಳಿಗೆ ಹೋಗುವುದೆ ಕೆಲಸ ಎಲ್ಲಾದರೂ ಊಟ ವಿದ್ದರೆ ಮೂಗಿಗೆ ಪುಡಿತುಂಬಿಸಿಕೊಳ್ಳುತ್ತ ಹೋಗುತ್ತಾಳೆ. ಯಾರಾದರೂ ಎಲ್ಲಿಗೆ ಎಂದು ಕೇಳಿದರೆ ಮನಸ್ಸು ಬಂದರೆ ಉತ್ತರ ಕೊಟ್ಟಳು, ಇಲ್ಲವಾದರೆ 'ನಿಮ್ಮಜ್ಜನ್ ಶ್ರಾದ್ಧಕ್ಕೆ' ಎಂದು ಮುಖಕ್ಕೆ ಹೊಡೆದ ಹಾಗೆ ಉತ್ತರಕೊಡುವಳು. ಅಕ್ಕುಬಿಡದೆ ಹೋಗುವ ಊಟಗಳೆಂದರೆ ಬಸುರಿ-ಬಯಕೆಯ ಊಟ, ನಾಮಕರಣ, ಅಲ್ಲಿಗೆ ಹೋದವಳು ಬಂದ ನೆಂಟರೆಲ್ಲ ಹೋಗುವ ತನಕ ಅಲ್ಲಿಯೆ ಇರುತ್ತಿದ್ದಳು.

ಸಿರಿಯತ್ತೆಯ ಮದುವೆದಿನ ನಡೆದ ಘಟನೆಯನ್ನು ಅವಳ ಬಾಯಿಂದಲೇ ಕೇಳಬೇಕು. 'ದಿಬ್ಣ ಬಂದಾಯಿತ್. ನನ್ಹತ್ರ ಯಾರೂ ಇರ್ಲಿಲ್ಲೆ. ಎಲ್ರೂ ಚಪ್ರಕ್ಕೋಡಿದ್ರ್. ನಂಗೊನ್ನಮೂನೆ ಹೆದ್ರಿಕೆ ಆದ್ಹಂಗಿದ್ದಿತ್ ಅಷ್ಟೊತ್ತಿಗೆ ಅಕ್ಕು ಬಂದ್ಲ್. 'ಓ ಅಕ್ಕು!' ಎಂದೆ ಅಯ್ಯಬ್ಬ ಅನ್ಸಿ. 'ಹೂಂ ಹೂಂ, ಅಕ್ಕುವಾ ಅವ್ಳ್ ನರ್ಪ!' ಹರಪಿದ ಹಾಂಗೆ ಉತ್ರ ಕೊಟ್ಲ್ ಅಕ್ಕು. ಸ್ವಲ್ಪ ದೂರ ನಿಂತಿದ್ಲ್ ದುರುದುರು ಕಂಡ್ಳ್. 'ಅಷ್ಟ್ ಚಂದ ಯಾಕ್ ಮಾಡ್ಕಂಡ್?' ಅಂತ್ಹೇಳಿ ಕೇಂಡ್ಲ್. ನಾ ಮಾತಾಡ್ಲಿಲ್ಲೆ. ಅವ್ಳ್ ಸ್ವರ ಸೀಳ್ ಬಿಟ್ಹಾಂಗಿದ್ದಿತ್. ಅವಳನ್ನೇ ಕ್ಯಾಂತ ಕೂತೆ. 'ಇಲ್ಬಾ' ಅಂದ್ಲ್. 'ಯಾಕೆ?' ಎಂದೆ. 'ಬಾ ಅಂದ್ರ್ ಬರ್ಕ್'. ಅಂದ್ಲ್, ನಂಗೆ ಯಾರನ್ನಾದ್ರೂ ಕರೀಕಂತ ಕಂಡ್ತ್. ಬೇಡ ಅಂತೆಳಿಯೂ ಕಂಡ್ತ್. 'ಅಕ್ಕೂ, ಹುಶಾರಿಲ್ಯ?' ಎಂದೆ ಉತ್ರಕೊಡ್ಡೆ ಸೀದ ನುಗ್ಗಿ ಬಂದದ್ದೇ

ನೆತ್ತೀವರೆಗೆ ಮುಡ್ಡ್ ಹೂವನ್ನೇ ಕಣ್ಮುಚ್ಚಿ ತೆರ್ಯುದ್ರೊಳ್ಗಿ ಹರ್ದ್ ತೈಗ್ದ್ 'ಸಾಕಷ್ಟ್ ಚಂದ! ನಿನ್' ಚಂದ ಕಂಡ್ ಮದ್ವೆ ಆಪಂವ ಖಂಡಿತ ಬಾಳ್ಸುದಿಲ್ಲೆ. ಗೋಡೆ ಮೇಲೆ ಬರ್ದಿಟ್ಕೊ' ಅಂದ್ಲ್. ಸತ್ಯಕ್ಕೂ ಹೇಳ್ತೆ ನಂಗ್ ಉಸ್ರಿರ್ಲಿಲ್ಲೆ. ಗಿಡ್ಡ ಇದ್ರೂ ಒಂದ್ರೀತಿ ಚಂದ ಇಂದ್ದಿದ್ಲ್ ಅಕ್ಕು! ಈಗ ಮಾತ್ರ ಬ್ರಹ್ಮರಾಕ್ಷಸಿ ಹಾಂಗೇ ಕಂಡ್ಲ್. ಒಂದೇ ಕ್ಷಣ, ಮತ್ ಕಾಂಬ್ಸಮಿಗೆ ಅಕ್ಕುವೇ. ಮನ್ಸಿಗೆ ಭಾರೀ ಬೇಜಾರಾಯ್ತ್. ಹೂಗ್ ಹರ್ದದಕ್ಕಲ್ಲ, ಹೀಲಿಗಟ್ಟಿದ್ದಾಂಗೀನ್ ಅವ್ಳ್ ಮುಖ ಕಂಡ್. 'ಎಂತ ಸೆಕೆಯ!' ಅಂತೆಳಿ ಕೈಯಿಂದ್ಲೇ ಗಾಳಿ ಬೀಸ್ಕಂತ, ಇನ್ನೊಂದು ಕೈಯಿಂದ ಟುವಾಲು ಹಾಕಿ ತಿಕ್ಕಿ ಮುಖ ಒರ್ಸ್‌ಕಂತ ಹೊರ್ಗ್ ಹೋದ್ಲ್ ಅಕ್ಕು. ಈ ಸುದ್ದಿ ವಾಸುಗ್ ಹೇಳಿರ? ಸುಮ್ನೆ ಬಿಡ್ತಿದ್ನ? ಜಪ್ಪಿ ಕೋಣೆಗೆ ಹಾಕಿ ಚಿಣಕ ಹಾಕ್ತಿದ್ದ. ನನ್ ಮದ್ವೆ ಚಪ್ರದೊಳ್ಗಿ ನಾ ಚಂದ ನಾ ಚಂದ ಅಂದ್ಕಂತ ಬೀಗ್ಕಂಡ್ ಕೂತವ್ಳ್ ಮಧ್ಯ ಅಕ್ಕು ಬಿಸಾತಿಲ್ದೆ ಮೂಗಿಗ್ ಟುವಾಲ್ ಹಾಕಿ ತಿರ್ಸುದನ್ನ ಹೇಂಗೆ ಕಾಂಬುಕಾತಿತ್? ದೊಡ್ಡತ್ತೆ ಬಂದವ್ಳ್ ಮದುಮಗಳು ಅಂತ್ಲೂ ಕಾಣ್ದೆ, ಬಾಯಿಗೆ ಬಂದ್ಹಾಂಗ್ ಬೈಯ್ದ್ಲ್. ಪುನಾ ತಲೆ ಬಾಚಿ ಹೂಗ್ ಮುಡ್ಸೀಳ್!

ಸಿರಿಯತ್ತೆ ಮದುವೆಯಾಗಿ ಹೋದ ದಿನ ಅಕ್ಕುವಿನದು ಗಲಾಟೆಯೋ ಗಲಾಟೆ. 'ನನ್ನ್ ಗಂಡ ಎಲ್ಲಿ ಸತ್ತ? ಈ ಕ್ಷಣ ತಂದುಕೊಡಿ!' ಎಂಬ ಸೊಲ್ಲು ಬಿಟ್ಟರೆ ಬೇರೆ ಇಲ್ಲ. ಗಾಳಿಗೆ, ಆಕಾಶಕ್ಕೆ ಟುವಾಲು ಹಾರಿಸಿ ಹಾರಿಸಿ ಕೇಳಿದಳು. ವಾಸು ಚಿಕ್ಕಪ್ಪಯ್ಯ ಹಲ್ಲಿನ ಚಡಿಗೆ ಕಡ್ಡಿ ಹಾಕುತ್ತಾ ನಿಂತಿದ್ದವ 'ಅಗಕಾಣಲ್ಲಿ, ಓ ತಟ್ಟಿ ಚಡಿಯೊಳ್ಗೆ!' ಎಂದು ಇತ್ತಿನ ಧಾತಿಲ್ಲದೆ ಮಲಗಿ ಗೊರೆಯುತ್ತಿದ್ದ ಅಡುಗೆಯ ಬಾಬು ಭಟ್ಟನನ್ನು ತೋರಿಸಿದ. ಭಾನು ಚಿಕ್ಕಿ ಒಂದು ಗೊಂಬೆ ತಂದು ಅವಳ ಎದುರು ಬಿಸಾಡಿ 'ನಿನ್ ಗಂಡ! ಯಾವಾಗ ಬಂದಿದ್ನೋ ಏನೋ. ಒಬ್ರೂ ಕಂಡವ್ರಿಲ್ಲ. ಅಕ್ಕು ಅಕ್ಕೂ ಅಂತೇಳಿ ಸೋರ್ಲೊಳ್ಗಿ ಅರ್ಚಕಂತಿದ್ದ. ಕರ್ಕಂಡ್ ಬಂದೆ' ಎಂದರೂ ಅವಳ ಆರ್ಭಟ ನಿಲ್ಲಲಿಲ್ಲ, ಆರ್ಭಟ ಹೆಚ್ಚಿದಷ್ಟೂ ನಗೆಯ ಅಬ್ಬರವೂ ಹೆಚ್ಚಿತು. ಸತ್ಯಮಣಿ ಎಂಬ ಮೂರು ಗೇಣುದ್ದದ ಹುಡುಗ ತಡೆಯದೆ ಓಡಿ ಹೋಗಿ ಬಾಬು ಭಟ್ಟನನ್ನು ಬಡಿ ಬಡಿದು ಎಬ್ಬಿಸಿ 'ಬಾಬು ಭಟ್ಟ, ಬಾಬು ಭಟ್ಟ, ನೀನ್ ಅಕ್ಕು ಗಂಡ ಅಂಬ್ರ!' ಅಂತ ನಾಲಿಗೆ ತುದಿ ಕಚ್ಚಿಕೊಂಡು ಟಿಸಿಲ್ಲೆಂದು ನಕ್ಕಿತು. 'ಅಯ್ಯಯ್ಯಬ್ಬ. ಅವಳನ್ ಕಟ್ಕಂಡ್ರ? ನನ್ ಕೈಕಾಲ್ ಸವರಿ ಒಲೆಗೆ ತುಂಬ್ಯಾಳ್. ಮೂರ್ ಮುಂಡಕ್ಕಿ ಕಾಳಿಗೆ ಮಾರ್ಕಂಡ್ ತಿಂದ್ರೂ ಆಶ್ಚರ್ಯ ಇತ್ತಾ?" ಎಂದ ಬಾಬು ಭಟ್ಟ. ನಗೆಗೆ ಅಮಲೇರುತ್ತಿತ್ತು. ಅಷ್ಟೊತ್ತಿಗೆ ಗೋಡೆಗೆ ಬೆನ್ನು ಆನಿಸಿ ಅಡಿಗೆ ಹೋಳ್ ಕತ್ತರಿಸುತ್ತ ಇದ್ದ ತೊಳೆದ ಕೆಂಡದಂತಹ ತಮ್ಮಣ್ಣಯ್ಯ ಎಂಬವ, ಇಷ್ಟರವರೆಗೆ ಸುಮ್ಮನೆ ನಾಟಕ ನೋಡುತ್ತಿದ್ದವ ಎದ್ದು ಬಂದ. ಯಕ್ಷಗಾನದಲ್ಲಿ ಸ್ತ್ರೀಪಾತ್ರಮಾಡುವ ಆತ

ನಡು ಬಳಕಿಸುತ್ತಾ, ಕೈ ಬೀಸಿ ಎದೆಗೆ ಹೊಡೆದುಕೊಳ್ಳುತ್ತಾ, 'ಪ್ರಿಯೇ, ನಿನ್ನ ಗಂಡನೆಂಬುವ ನಾನು ಬಂದಿದ್ದೇನೇ ನನ್ನಿಂದೇನಾಗಬೇಕು'–ಎಂದು ನಾಟಕೀಯವಾಗಿ ಕೇಳುತ್ತ ಎಲ್ಲರ ಮುಖ ನೋಡಿ ಮುಗುಳು ನಗುತ್ತಿರಲು ಇದ್ದಕ್ಕಿದ್ದಂತೆ ಹಾರಿ ಬಿದ್ದ. ಅಕ್ಕು ಸರಕ್ಕಂತ ಏರಿ ಬಂದು ಅವನನ್ನು ಕಚ್ಚಿ ಬಿಟ್ಟಿದಳು. ಪಾಪದವರಂತೆ ಒಳಗೆ ಹೋಗಿ ಮೂಲೆಯಲ್ಲಿಟ್ಟಿದ್ದ ಕೊಡಪಾನದಿಂದ ಒಂದು ಚೊಂಬು ನೀರು ಬಗ್ಗಿಸಿಕೊಂಡು ಗಟಗಟ ಕುಡಿದನು.

'ಏ ತಮ್ಮಣ್ಣಯ್ಯ, ಬಾಲ ಮಡ್ಚ್‌ಕಂಡ್ ಆಚೆಗೆ ಹೋಗ್, ನಿನ್ ಕೆಲ್ಸ ಕಾಣ್. ನನ್ ಸುದ್ದಿಗ್ ಬತ್ಯಾ? ನಿನ್ ಹೆಂಡ್ತಿ ಮೊನ್ನೆ ಯಾರೊಟ್ಟಿಗ್ ಚಾಂಚ್ಕಂಡ್ ಮನ್ಕಂಡಿದ್ಲ್ ಅಂತೇಳಿ ಹೇಳುದಾ ಈಗ?' ಎಂದು ದೊಡ್ಡ ಸ್ವರದಲ್ಲಿ ಕತ್ತಿ ಬೀಸಿದಂತೆ ಹೇಳುತ್ತಾ ಕೋಣೆಗೆ ಹೋಗಿ ಬಾಗಿಲು ಹಾಕಿ ಕೊಂಡುಬಿಟ್ಟಳು, ಎಲ್ಲರ ನಗೆ ಸುತ್ತುವರಿದು ತಮ್ಮಣ್ಣಯ್ಯನ ನಗೆಯನ್ನು ಆರಿಸಿಬಿಟ್ಟಿತು. ಅಕ್ಕು ಈಗ ಎಲ್ಲರಿಗೂ ಹಡೆ ಹಡೆಯಾದ ಮಾತನ್ನಾಡುತ್ತಾಳೆ. ಸುಬ್ಬತ್ತೆಗೂ ಕೂಡ ಮನಸ್ಸಿಗೆ ಬಂದಂತೆ ಬಯ್ಯುತ್ತಿರುತ್ತಾಳೆ. ಆ ಸಮಯಕ್ಕೆ ಅಲ್ಲಿಗೆ ಬಂದ ದೊಡ್ಡಜ್ಜಯ್ಯ ವಾಸು ಚಿಕ್ಕಪ್ಪನಿಗೆ ಹೇಳಿ ಬಾಸುಂಡೆ ಬೀಳುವಂತೆ ಹೊಡೆಸುತ್ತಾರೆ.

ಸಿರಿಯತ್ತೆಯ ಖಾಸಾ ಅಕ್ಕ ಅಕ್ಕು. ಚಿಕ್ಕ ಚಿಕ್ಕ ಹುಡುಗರು ಆಕೆಯನ್ನು ಅಕ್ಕು ಎಂದೇ ಕರೆಯುತ್ತಿದ್ದರು. ಅಕ್ಕು ಇಡೀ ಊರಿಗೇ ಸಸಾರವಾಗಿಬಿಟ್ಟಿದ್ದಳು. ಗಂಡ ಸನ್ಯಾಸಿ ಹಿಂದೆ ಹೋದ ಲಾಗಾಯ್ತಿಂದ ಬಸುರಿ ಪಾರ್ಟು ಮಾಡುವ ಅಕ್ಕುವಿಗೆ ಒಂದು ಸಾರಿ ದೊಡ್ಡಜ್ಜ ಹಿಡಿಕಟ್ಟಿನಲ್ಲಿ ಹೊಡೆದಿದ್ದರು. ಆಗ ಅಕ್ಕು 'ಅಪ್ಪಯ್ಯ, ನನ್ನ ಮಗು ಸಾಯತ್, ನಿಮ್ಗೆ ಪಾಪ ತಟ್ಟತ್ ಕಾಣಿ' ಎನ್ನುತ್ತ ಬಗ್ಗಿಕೊಂಡೆ ಹೊಟ್ಟೆ ತಪ್ಪಿಸಿಕೊಳ್ಳುತ್ತಿದ್ದಳು ಒಮ್ಮೊಮ್ಮೆ ಬಾಣಂತಿಯ ಹಾಗೆ ಮಾಡುತ್ತಿದ್ದಳು.

ಸನ್ಯಾಸಿಯ ಜೊತೆ ಹೋಗಿದ್ದ ಅಕ್ಕುವಿನ ಗಂಡ ಊರಿಗೆ ಬರುತ್ತಾನೆ. ಹೀಗೆ ಬಂದ ಈತನನ್ನು ಎಲ್ಲರೂ ಸಸಾರದಿಂದ ನೋಡುತ್ತಾರೆ. ದೊಡ್ಡಜ್ಜ ಅಕ್ಕುವಿಗೆ ಬರಹೇಳಿದರೆ ಅವಳು ಮನೆಯಲ್ಲಿಯೇ ಇರಲಿಲ್ಲ. ಹಿಂಬದಿಯ ಬಾಗಿಲಿನಿಂದ ಒಳಬಂದ ಅಕ್ಕು ಗಂಡ ಮತ್ತು ಆಕೆಯ ಅಪ್ಪನಿಗೆ ಕೇಳುವಂತೆ 'ಅಕ್ಕು ಸತ್ ಮೂರು ಹಗಲು ಮೂರು ರಾತ್ರಿ ಆಯಾಯ್ತ್. ಈ ನಾರಟೆ ಕ್ರಿಯೆ ಹಿಡಿಯೊಕೆ ಬಂದದ್ದಾ ಕೇಣಿ!' ಎಂದೆನ್ನುತ್ತಾಳೆ. ದೊಡ್ಡಜ್ಜ ಸಂಕಪ್ಪನಿಗೆ ಎರಡು ಮೂರು ದಿನ ಇಲ್ಲೇ ಇದ್ದು ಅಕ್ಕುವನ್ನು ಕರೆದುಕೊಂಡು ಹೋಗುವಂತೆ ಹೇಳುತ್ತಾರೆ. ಆದರೆ ಅಕ್ಕು 'ಂಯೆಂತದ್? ಇನ್ನ್ ಇವ್ನೊಟ್ಟಿಗೆ ಹ್ವೋಪ್ದ! ನನ್ ಹ್ಯೆಣ ಸಮೇತ ಹೋಗ!'– ಎಂದು ಹಠಹಿಡಿಯುತ್ತಾಳೆ.

ಸಂಕಪ್ಪ ಎರಡು ರಾತ್ರಿ ಮನೆಯಲ್ಲಿದ್ದ. ಅಕ್ಕು ಮೂಲೆಕೋಣೆಯಲ್ಲಿಯೇ ಮಲಗಿದಳು. ಒಳಗೆ ಕಾಲಿಡಲಿಲ್ಲ. ಆ ಬೆಳಗ್ಗೆ ವಾಸುಚಿಕ್ಕಪ್ಪಯ್ಯನ ಹತ್ತಿರ ಪಿಸುಗುಡುತ್ತಿದ್ದರು ದೊಡ್ಡತ್ತೆ 'ನಾ ನಿನ್ನೆ ರಾತ್ರಿ ಏಣಿ ಮೆಟ್ಲಿನ ಬುಡದಗೆ ಕೂತ್ಕಂಡ್ ಕಾಂತಿದ್ದೆ. ಹಂಗರೆ ಈ ಪ್ರಾಣಿ ಸನ್ಯಾಸಿಯೇ ಆಯ್ತಾ ಎಂತದು ಅಂದ್ಕಂಡ್ ಮಾರಾಯ. ಘಟ ಅರ್ಧರಾತ್ರಿ ಮೇಲೆ ಮೆಲ್ಲ ಎದ್ದು ಮೂಲೆ ಕೋಣೆಗೆ ನಡ್ದದ್ದೆ ಅಲ್ದ! ಅಷ್ಟ್ ಕಂಡೇ ನಾ ಒಳ್ಗ್ ಬಂದ್ ಕಣ್ಮುಚ್ಚಿದ್!'

ಇದು ಅಲ್ಲೇ ದೇವರಿಗೆ ಹೂ ಮಾಲೆ ಕಟ್ಟುತ್ತ ಕುಳಿತ ನಮಗೆಲ್ಲ ಕೇಳಿಸಿದಾಗ 'ಈಗಿನ ಹೆಣ್ಮಕ್ಳಿಗೆ ಪ್ರಾಯ ಬತ್‌ಬತ್ ಅಂಬುದ್ರೊಳ್ಗೆ ಸೂ ಅಂಬುಕಿಲ್ಲೆ. ಕಿವಿ ಬೀಳೆಲ್ಲ ಅರ್ಥಿಯಾಯ್ತ್'– ಎಂದರು. ಕಿವಿ ಮಡಚಿಕೊಳ್ಳುವಂತಾಯ್ತು.

ಇದು ದೊಡ್ಡತ್ತೆಯಲ್ಲವೇ? 'ಹಾಲು ಮಸ್ತಿತ್ತಾ ಕೇಣ್'– ಎಂದು ವಾಸು ಚಿಕ್ಕಪ್ಪಯ್ಯನಿಗೆ ಹೇಳಿದ್ದು? ಮನಸ್ಸು ಬಂದಾಗ ಯಾರಿದ್ದಾರೆ ಸುತ್ತಮುತ್ತ ಎಂಬ ಗೋಚರ ಇಲ್ದೆ ಬೇಕು ಬೇಕಾದ್ದು ಮಾತಾಡುವುದು. ನಮ್ಮ ಹತ್ತಿರ ಮಡಿ ಮಡಿಯಾಗುವುದು. ಇವರು ಹೆಣ್ಣಲ್ಲವ ಹಾಗಾದರೆ? ಅಂಬೆಲ್ಲ ತರ್ಕಗಳೂ ಹೂ ಪಗ್ಗದ ಗಂಟಿನೊಳಗೆ ಸೇರುತ್ತ ಮಾಲೆ ಉದ್ದವಾಗುತ್ತಿರುವಾಗ ಅಕ್ಕುವಿನ ಸವಾರಿ ಬಂತು. ಭೂತ ಬಂದಂತೆಯೇ ಅರಳು ಹೊಟ್ಟಿದಂತೆ ಮಾತಾಡಿಕೊಂಡೇ ಬಂದಳು. 'ಓಯ್, ಓ ಹ್ಹೋಯ್, ದೊಡ್ಡತ್ತೆ ಎಂಬವ್ರೆ– ಎಲ್ಲಿ ಹೋದ್ರಿ? ಬನ್ನಿ, ಬನ್ನಿ, ಬನಿ  ಬನಿ ಬನಿ ಬೇಗ. ಮಾತಾಡಲಿಕ್ಕೆ ಕೋರ್ಜಿಯುಂಟು. ಆ ಎಲೆ ಅಡಿಕೆ ಹರಿವಾಣ ತನ್ನಿ....

ದೊಡ್ಡತ್ತೆ ಅವಳ ಸ್ವರದ ಗೆಲ ಕಂಡು 'ಈ ರಂಡೆಗ್ ಜೀವ ಹೋಯ್ತಂತೆಳಿ ಕಾಣತ್'– ಎನ್ನುತ್ತಲೇ ಅರೆ ನಗುವಿನಲ್ಲಿ ಎದುರು ಬಂದರು. ಅವರ ಹಿಂದೆ ಮನೆಯ ಉಳಿದವರು, ಕೆಲಸದವರು, ನಾವೂ, ಎಲ್ಲರೂ. ಕಾಲು ಮೇಲೆ ಕಾಲು ಏರಿಸಿ ಕೂತಲ್ಲೇ ಆನೆಯಾಡುತ್ತಾ 'ಓ ಹೋಯ್, ಕೇಳಿದಿರೇನು ಸಮಾಚಾರ? ಬಂದವ ಹಿಡ್ಕಂಡದ್ದೇ. ರಸ್ತೆ ಬದಿ ಹೆಣ್ಣಿನ್ ಹಾಂಗಲ್ಲ ನೀನ್ ಎಂದ. ಥೂ ನಾಯಿ ಜಾತಿಯವ್ನೆ, ತೆವ್‌ಡ್ಕೋ ಆಚೆ. ಮುಟ್ಟೇಡ. ನಾ ಬಸ್ರಿ' – ಎಂದೆ. ಆದ್ರೂ ಬಿಡ್ಲಿಲ್ಲೆ. ಮಾಡಿಸ್ತೆನಿಂಗೆ ಅಂದೇ, ತೊಟ್ಲಿನ್ ಸರಪಣಿ ಎಳ್ದೇ, ಬೀಸಿ ಬೀಸಿ ಹೊಡ್ದೆ. ಎಲ್ಲಿತ್ ನಸ್ರಾಣಿ? ಪಾಣಿಪಂಜಿ ಸುತ್ಕಂಡ್ ಪುಡ್ಚೋ...'

ನೀವೆಂತದೇ ಹೇಳಿ ದೊಡ್ಡತ್ತೆ. ಇದ್ರಕ್ಕಿಂತ ಆ ಅಡ್ಡದ್ಮನೆ ತಿಮ್ಮಪ್ಪಯ್ಯ ಅಡ್ಡಿಲ್ಲೆ. ಅವ್ನ್ಯೆದಿಯೇನ್! ತುಟಿಯೇನ್!...

ದೊಡ್ಡಜ್ಜಯ್ಯ ಜಲ್ಲು ಊರಿ ಬರುವ ಶಬ್ಧ ಕೇಳಿಸಿತು. ವಾಸು ಚಿಕ್ಕಪ್ಪಯ್ಯ ಅಕ್ಕುವಿನ ಬಾಯಿ ಒತ್ತಿ

ಹಿಡಿದು ವಿಶೇಷದಡಿಗೆ ಕೋಣೆಗೆ ದರದರನೆ ಎಳೆದುಕೊಂಡು ಹೋದ. ಅಲ್ಲಿದ್ದ ಕೋಲುಸೌದೆ ಎಳೆದು ಒಗೆಯುವ ಕಲ್ಲಿಗೆ ವಸ್ತ್ರ ಜಪ್ಪಿದಂತೆ ಜಪ್ಪಿದ. 'ಈ ಮರುಳು ಹೊಳೆ, ಗುಂವಿ, ಬೇಣ, ಮತ್ತೊಂದ್ ಮೊದ್ಲೊಂದ್ ಅಂತೇಳಿ ತಿರುಗಿದರೆ ಅಡ್ಡದ್ಮನೆ ತಿಮ್ಮಪ್ಪಯ್ಯ ಬಿಟ್ಟ್ ಅವನಪ್ಪೂ ಹಿಡ್ಕಂತ. ಇನ್ಮೇಲ್ ಎಲ್ಲ ತಿರುಗಾಟ ಬಂದ್' ಎಂದು ಹೊಡೆಯುತ್ತಲೇ ಇದ್ದನು. ಅದೇ ಸಮಯಕ್ಕೆ ಬಂದ ಅಜ್ಜಯ್ಯ 'ನನ್ ಯಾವ ಜನ್ಮದ್ ಪ್ರಾರಬ್ಧ ಇದ್!' ಎಂದು ಸಂಕಟ ಪಟ್ಟರು. 'ಹಾಕ್ ನಾಕ್, ಇನ್ನೂನಾಕ್, ಸತ್ರೆ ಸತ್‌ತ್, ಮರ್ಕುವವ್ರ್ ಯಾರಿಲ್ಲೆ' ಎಂದರು.

ವಾಸುಚಿಕ್ಕಪ್ಪಯ್ಯ ಅಕ್ಕುವಿಗೆ ಹೊಡೆದು ಹೊಡೆದು ಸೋತು ಹೊರಗೆ ಬಂದು ಚಿಲಕ ಹಾಕಿಕೊಂಡ, ಆಗ ಅಕ್ಕು ಕಿಟಕಿಯ ಹತ್ತಿರ ಬಂದು ವಾಸು ಚಿಕ್ಕಪ್ಪಯ್ಯನನ್ನು ಕುರಿತು 'ಆ ತಮ್ಮಣ್ಣಯ್ಯನ್ ಹೆಂಡ್ತಿ ಕಾಯ್ತ್ ಕಾಣ್. ಓಡು, ಓಡ್ ಬೇಗ. ಮರ್ಯಾದೆ ಸತ್ತವ್ನೇ ಈಗ ಹೊಡೀ ಬಾ... ಕಾಂಬ' ಎಂದೆನ್ನುತ್ತಾಳೆ.

ಈ ಮೇಲಿನ ಅಕ್ಕು ಕಥೆಯಲ್ಲಿ ಸುಂದರವಾದ ಕುಂದಾಪುರ ಕನ್ನಡ ಭಾಷೆಯನ್ನು ಲೇಖಕಿ ಯಾವುದೆ ನಿರ್ಬಂಧವಿಲ್ಲದೆ ಬಳಸಿದ್ದಾರೆ. ಇದು ಕಥೆಗೆ ಒಂದು ಮೆರಗನ್ನು ಹಾಗೂ ಸಹಜತೆಯನ್ನು ತಂದುಕೊಡುತ್ತದೆ. ಕಥೆಯ ಕೊನೆಯಲ್ಲಿ ಲೈಂಗಿಕ ಪಾವಿತ್ರ್ಯತೆ ಹೆಣ್ಣಿಗೆ ಮಾತ್ರ ಏಕೆ? ಎಂದು ಕುರಿತು ವಿಶ್ಲೇಷಿಸುವಂತೆ ಮಾಡುತ್ತದೆ.

### ಅಮ್ಮಚ್ಚಿಯೆಂಬ ನೆನಪು:-

ಅಮ್ಮಚ್ಚಿಯೆಂಬ ನೆನಪು ಕಥೆಯಲ್ಲಿ ಕುಂದಾಪುರ ಕನ್ನಡ ಹೆಚ್ಚಾಗಿ ಬಳಕೆಯಾಗಿದೆ. ಈ ಕಥೆ ಒಬ್ಬ ತಂದೆಯಿಲ್ಲದ ಎಳೆಯ ಹುಡುಗಿ ಅಮ್ಮಚ್ಚಿಯ ಕುರಿತದ್ದು. ಆಕೆ ಬಂಡಾಯದ ಅರಿವನ್ನು ಒಳಗಿಟ್ಟುಕೊಂಡಿರುವವಳು. ವೆಂಕಪ್ಪಯ್ಯನಿಂದ ಅತ್ಯಾಚಾರಕ್ಕೆ ಒಳಗಾಗಿ ಒತ್ತಾಯದಿಂದ ಅವನನ್ನೇ ಮದುವೆಯಾಗುತ್ತಾಳೆ. ಇಲ್ಲಿ ಬರುವ ಪಾತ್ರಗಳು, ಭಾಷೆ ಸಹಜವಾಗಿ ವ್ಯಕ್ತವಾಗಿದ್ದು ಬುದ್ಧಿಪೂರ್ವಕವಾಗಿ ಮೇಲಿನಿಂದ ಸೇರಿಸಿದಂತೆ ಅನ್ನಿಸುವುದಿಲ್ಲ.

ಅಮ್ಮಚ್ಚಿ ಒಂದು ದಿನ ವಾರೆ ಬೈತಲೆ ತೆಗೆದು ಎರಡು ಜಡೆ ಕಟ್ಟಿಕೊಂಡು ಶಂಭಟ್ಟರ ಮನೆಯ ಸತ್ಯನಾರಾಯಣ ಪೂಜೆಗೆಂದು ಹೊರಟಳು. ವೆಂಕಪ್ಪಯ್ಯ ದಾರಿಯಲ್ಲೇ ಸಿಕ್ಕಿದ. 'ಏನಿಯ? ಇದೇನಿಯ ಯೇಸ ಬೊಂಬಾಯಿ ಲೇಡಿಯ ಹಂಗೆ, ವಾರೆ ಬಕ್ತಲೆ! ಶಿ... ಶಿ... ನಡೆ ಮನೆಗೆ. ಸರಿಯಾಯಿ ಬಾಚಿಂಡು ಹೋವು'

ಎಂದ ಅದಕ್ಕೆ ಅಮ್ಮಚ್ಚಿ 'ಹೋವುಯ, ನೀ ಮನೆಗೆ ಹೋವು. ಹೋಯಿದ್ದ್ ಗಡದ್ದು ಒಂದು ಲೋಟೆ ಚಾಯ ಕುಡಿ. ಅಮ್ಮನ ಹಕ್ಕೈ ಹೇಳ್, ಹೆಂಗೂ ಮಾಡಿ ಕೊಡ್ತ್ಲ್... ನನ್ನ ಸುದ್ದಿಗೆ ಮಿನಿ ಬರಳೆ. ಬೋಳುಮಂಡೆ ಕಾಕ. ನಿಂಗೆ ವಾರೆ ಬಿಡು ಯಾವ ಬಕ್ತಲೆಯೂ ತೆಗೆಯಗಾಗದ ಸಂಕಟಕ್ಕೆ ನಂಗೆ ಯಾಕೆ ಹೇಳ್ತಿ?' ಎಂದೆನ್ನುತ್ತಾಳೆ.

ಚಿಕ್ಕಂದಿನಲ್ಲಿಂದಲೇ ಅಮ್ಮಚ್ಚಿಯ ಮನೆಯಲ್ಲೇ ಬೆಳೆದ ವೆಂಕಪ್ಪಯ್ಯ, ಅಮ್ಮಚ್ಚಿಯ ಹಕ್ಕುದಾರನು ತಾನೇ ಎಂಬಂತಾದನು. ಅಮ್ಮಚ್ಚಿ ಒಮ್ಮೆ ಪೇಟೆಗೆಂದು ಹೊರಟಳು ಮನೆಗೆ ಬೇಕಾದ ಸಾಮಾನುಗಳನ್ನು ತರುತ್ತೇನೆಂದು ಅಮ್ಮನ ಹತ್ತಿರ ದುಡ್ಡನ್ನು ತೆಗೆದುಕೊಂಡಳು. ಪೇಟೆಗೆಂದು ಹೊರಟಾಗ ಎದುರಿಗೆ ವೆಂಕಪ್ಪಯ್ಯ ಬಂದನು. ವೆಂಕಪ್ಪಯ್ಯ ಅಮ್ಮಚ್ಚಿಗೆ 'ಏನು, ಏನು, ಏನು! ಕೊಲ ಕಟ್ಟಿಂಡ್ ಹೊರಟದ್ ಎಲ್ಲಿಗೆ ಮೆರವಣಿಗೆ?'

'ಟೋಕರ ಗುಡ್ಡೆಗೆ'

ಯಂತದಕ್ಕೆ ಹೊರಗೆ ಹೋತ್‌ದೀಗ?...

'ಸಂಕ ಪಾಸಾಣ ತಗಂಬುಗೆ. ದಾರಿ ಬಿಡಿಯ ನೀನು!

ಆತ ದಾರಿ ಬಿಡದೆ 'ಏನು ಯೇಸ ತಕಂಡು ಹೋತ ಪೇಟೆಯವ್ವ ಹಂಗೆ! ಶ್ಯೆಕ್ಸ್... ಎದೆ ಎರಡೂ ಕಾಣ್ತ ಹಂಗೆ ಪಟ್ಟಿ ಸೆರಗು ಹಾಸಿಂಡ್ ಹೊರಟಿಯಲ್ಲ! ಯಾರ ಮರ್ಯಾದೆ ತೆಗೆಗೆ?' ಎಂದ. ಅವ ಅಮ್ಮಚ್ಚಿಗೆ ಬೈದರೂ ಜೊತೆಗಿದ್ದ ನನಗೂ ಆ ಬೈಗುಳದ ಬಸಿಯನ್ನು ಹೇಗೆ ತಾಕಿಸುತ್ತಿದ್ದ! ಅಮ್ಮಚ್ಚಿ ದುರುಗುಟ್ಟಿ ಅವನನ್ನೇ ನೋಡುತ್ತ 'ನೀ ಹೋವುಯಾ ಕೋಮಣ ಬಿಟ್ಟಿಂಡ್ ಎಲ್ಲಿಗೆ ಬೇಕಾರೂ. ನಾ ಕೇಣ್ತ್ನ? ನಾ ನಂಗೆ ಬೇಕಾದ ಹಂಗೆ ಹೊರಟರೆ ನಿಂಗೆ ಯಾಕೆ ಕಿಚ್ಚು?'

'ನಡೆ ಒಳಗೆ ಅಂದೆ',

'ನೀ ಯಾರು ನಂಗೆ ಹೇಳುಗೆ ಅಂದೆ'

'ಕಾಲು ಮುರಿತೆ'

'ನಾನೇನು ಬಾಯಿಗೆ ಕಡ್ಲೆ ಕಾಳು ಬೀಸಿಂತ ಕುಳ್ಕಂತ್ನ?'

ವೆಂಕಪ್ಪಯ್ಯ ಸೀತತ್ತೆಯನ್ನು ಕರೆದ! 'ಹಿಂಗೆಲ್ಲ ಮಾಡಿಂಡ್ ಇವಳು ಪೇಟೆಗೆ ಹೊರಡ್ತದ್, ಬಾಸಾಯಿ ತಿಂತದ್, ಯಾಕೆ ಬೇಕಾಯಿ ಈಗ! ಪೇಟೆ ಸಾಮಾನು ಬೇಕಾರೆ ನಾನು ಕೊಣಂದ್ ಕೊಡ್ತಿಲ್ಲಯ?' ಮುಂತಾಗಿ

ಹೇಳುತ್ತ ಹೇಳುತ್ತ ಕಡೆಯ ಬಾಣವಾಗಿ 'ನಿಮಗೆ ಗೊತ್ತಿಲ್ಲೆ, ಇವಳು ಪೇಟೆ ಅಂದ್ ಹೋತ್‌ದ್, ಆ ಶಂಭಟ್ಟರ ಮನೆಗಲ್ದ ಅವರ ಮನೆ ಜಗಲಿ ಕಾಸ್‌ತದ್ ಬಾಯಿ ಕಳ್ದ್ ನಗಾಡ್‌ತ್‌ದ್. ಅವು ಇವಳ ಹಲ್ಲೆಲ್ಲ ಲೆಕ್ಕ ಮಾಡಿಂತೋ'. ಸುಳ್ಳು ಸುಳ್ಳು ಸೀತತ್ತೆ ಎಂದು ನಾನು ಕಷ್ಟ ಪಟ್ಟು ಕೂಗಿದ್ದು ಸೀತತ್ತೆಗೆ ಕೇಳಿಸುವುದೇ ಇಲ್ಲ. ಸುರುಮಾಡಿಯಾಯಿತು ಅವರು, 'ಹೌದ್ದ ಹೆಣ್ಣೆ, ಹಿಂಗಾ ಇಚಾರ?... ಅಂತೆಲ್ಲ ಇರುತ್ತಲ್ಲ?

'ಅವರ ಮನೆಗೆ ಹೋತಾರೆ ನಿಂಗೆ ಹೇಳಿಯೆ ಹೋಪೆ. ಸುಳ್ಳು ಹೇಳ್ತ ಗರ್ಜು ಇವತ್ತಿಗೆ ನಂಗಿಲ್ಲೆ. ಈ ಬಿರ್ಕನಕಟ್ಟೆ ಭೂತದ ಮಾತ್ ಕೇಂಡ್‌ದ್ ನಂಗೆ ಯಾಕೆ ಬೈತೆ ನೀನು?'

ಸೀತತ್ತೆ ಸ್ಫೋಟವಾದರು, 'ಅಯ್ಯೋ... ಹೆಚ್ಚುವಾದ ಮಾಡಳೆ ಮಾರಾಯ್ತಿ, ಇನ್ನು ವೆಂಕಪ್ಪಯ್ಯನೂ ಇಲ್ದೆ ಹೋದ್ರೆ ಆಗ ಗೊತ್ತಾಕ್ಕ್ ನಿಂಗೆ ನಮ್ಮ ಅವಸ್ಥೆ ಏನ್ ಅಂದ್...' ಅಂತೆಲ್ಲ ಅವನ ಎದುರಿಗೇ ಕಿರುಚುತ್ತಾ, ಹೊರಟುನಿಂತ ಅಮ್ಮಚ್ಚಿಯನ್ನು ಅಕ್ಷರಶಃ ಒಳಗೆ ನೂಕಿದರು.

ಸತ್ಯ ಹೇಳಿದರೆ ಎಲ್ಲಿಗೂ ಹೋಗಲು ಸಾಧ್ಯವಿಲ್ಲ ಎಂದು ತಿಳಿದ ಅಮ್ಮಚ್ಚಿ, ದೇವಸ್ಥಾನಕ್ಕೆ ಹೋಗುತ್ತೇನೆಂದು ರಮಾಟೀಚರ್ ಮನೆಗೆ ಹೋದಳು. ಹಿಂದುಗುಬ್ಬಿಯ ರವಕೆ ಹೊಲಿದು ಕೊಡುವಂತೆ ಹೇಳುತ್ತಾಳೆ. ಅಳತೆಯನ್ನು ತೆಗೆದುಕೊಂಡ ರಮಾಟೀಚರ್ ಕೊನೆಗೆ 'ಅಲ್ಲವನ ಅಮ್ಮಚ್ಚಿ, ಬ್ಯಾಕ್ ಬಟನ್ ಬ್ಲೌಸ್ ಹೊಲಿಯಬಹುದು ಕಷ್ಟವಲ್ಲ. ಆದರೆ ವೆಂಕಪ್ಪಯ್ಯ ಕೊನೆಗೆ ನನಗೆ ಬಂದು ಗಲಾಟೆ ಮಾಡಿದರೆ? ಅವನಿಗೆ ಇದೆಲ್ಲ ಖುಶಿ ಇದ್ದ ಹಾಗೆ ಕಾಣುವುದಿಲ್ಲ...' ಎಂದರು. ಅದಕ್ಕೆ ಅಮ್ಮಚ್ಚಿ 'ಹ್ಞಾಂ! ಏನಂದಿರಿ ಟೀಚರ್? ಅವ ಯಾವ ದೊಡ್ಡ ಗುರಿಕಾರ ನಿಮಗೆ ಗಲಾಟೆ ಮಾಡಲಿಕ್ಕೆ! ಇದು ನನ್ನ ರವಕೆ. ನನಗೆ ಬೇಕಾದ ಹಾಗೆ ಹೊಲೆಯಿರಿ' ಎಂದೆನ್ನುತ್ತಾಳೆ. ಹೊಲಿದ ರವಿಕೆಯನ್ನು ರಮಾಟೀಚರ್ ಅಮ್ಮಚ್ಚಿಯ ಮನೆಗೆ ಕೊಟ್ಟು ಕಳಿಸುತ್ತಾರೆ. ರವಿಕೆ ವಿಚಾರ ತಿಳಿದ ವೆಂಕಪ್ಪಯ್ಯ ಅದನ್ನು ಸೀತತ್ತೆಗೆ ತಿಳಿಸುತ್ತಾನೆ. ಇದರಿಂದ ಅಮ್ಮಚ್ಚಿ ಸಿಡಿಮಿಡಿಗೊಳ್ಳುತ್ತಾಳೆ.

ವೆಂಕಪ್ಪಯ್ಯ ತಿರುಪತಿಗೆಂದು ಹೋಗುತ್ತಾನೆ. ವರ್ಷಂಪ್ರತಿ ಹೋಗುವಂತೆ ಈ ಬಾರಿಯು ಹೋಗಿದ್ದ. ಎಂಟು ದಿನ ಮನೆಯಲ್ಲಿರಲಿಲ್ಲ. ಈ ಸಮಯದಲ್ಲಿ ಅಮ್ಮಚ್ಚಿ ಅವನ ಕೋಣೆಗೆ ಹೋಗಿ ಅವನ ಶರ್ಟಿನ ಹಿಂಬಾಗ ಕೊಯ್ದಳು, ಮುಂಬಾಗ ಹೊಲೆದಳು. ಮುಂಭಾಗದ ಗುಂಡಿಗಳನ್ನು ಹಿಂಭಾಗಕ್ಕೆ ಹೇಗೆ ಬೇಕೋ ಹಾಗೆ ಇಟ್ಟಳು.

ತಿರುಪತಿಯಿಂದ ಬಂದ ವೆಂಕಪ್ಪಯ್ಯ ಅಲ್ಲಿನ ವಡೆ, ಲಾಡು, ಮೊಸರನ್ನದ ವರ್ಣನೆ ಮಾಡಿದನು. ಅಲ್ಲಿ ಹೋಟೆಲ್ ಇಡುವ ತನ್ನ ಪ್ಲಾನನ್ನು ವಿವರಿಸಿದನು. ಆಗ ಅಮ್ಮಚ್ಚಿ 'ಅಬ್ಬ! ಅಂತೂ ಭಂಡಾರ ಹೋತು ಅಂತಾಯಿತು' ಎಂದಳು ವೆಂಕಪ್ಪಯ್ಯ ಪ್ರಸಾದದ ಗಂಟು ಬಿಚ್ಚಿ ಸೀತತ್ತೆಯ ಕೈಗೆ ಕೊಟ್ಟು 'ಎಲ್ಲ ತಕಣಿ. ಉಂಚ ಬುದ್ದಿ ಸಮ ಆತ ಕಾಂಬ' ಎಂದು ಅಮ್ಮಚ್ಚಿಯನ್ನು ನೋಡಿ ಹೇಳಿ ಸ್ನಾನಕ್ಕೆ ಹೊರಟುಹೋದ. ಸ್ನಾನ ಮುಗಿಸಿ ಬಂದು 'ಇನ್ನು ಊಟ, ಊಟ, ಊಟ, ಯಂಥಾ ಹಸಿತ್ ಅಂದ್ರೆ! ಈಗ ಬಂದೆ ಶರಟು ಹಾಕಿಂಡ್...' ಎನ್ನುತ್ತ ಕೋಣೆಗೆ ಹೋದ.

ಹೊರಗೆ ಬಂದದ್ದು – ರಾವಣಾಸುರ!

'ಎಲ್ಲಿ ಆ ಸೂಟೆ. ಆ ಮಾರಿ... ಹಾಂಕಾರಿ... ಅವಳ ಸತ್ಯನಾಶ ಮಾಡಿಬಿಡ್ತೆ...' ಕೂಗಿದ. ಹೆದರಿ ಉಪ್ಪರಿಗೆ ಮೆಟ್ಟಲಿನ ಮೂಲೆಗೆ ಓಡಿ ಕುಳಿತುಕೊಂಡ ನನ್ನನ್ನು ಅನಮತ್ತು ಎತ್ತಿ' ಎಲ್ಲಿ... ಹೇಳು, ಹೇಳ್ತಿಯಾ ಇಲ್ಲ ಎರಡು ಬಾರ್ಸಗ? 'ಸೀತತ್ತೆ ಗಾಬರಿಯಿಂದ 'ಏನು! ಏನಾಯ್ತಿಯ? ಏನಾಯ್ತೀಗ... ಬರ್ತರೊಳಗೆ. ರಂಡೆ ಏನ್ ಮಾಡ್ತ್?' ಎಂದರೆ ಅದಕ್ಕುತ್ತರಿಸದೆ ಹಿಡಿತ ಇನ್ನಷ್ಟು ಬಿಗಿಮಾಡಿ 'ಹೇಳ್ ಎಲ್ಲಿ ಅದ್... ಎಂದು ಮತ್ತೆ ಕೂಗಿದ.

'ಅಮ್ಮಚ್ಚೀ...'

ಅಮ್ಮಚ್ಚಿ ಬಂದು ತಳಿಕಂಡಿಗೊರಗಿ ಕಿಲಿ ಕಿಲಿ ನಗುತ್ತ ನಿಂತದ್ದು ಕಾಣಿಸಿತು, 'ಏನು ತಿರುಪತಿಗೆ ಹೋದ್ದೇ ಕಣ್ಣು ಮೇಲಾಯ್ತ? ನಾನು ಇಲ್ಲೇ ಇದ್ದೆ. ಕಾಣ್ತಿಲ್ಲಯ? ಆ ಮಗುನ್ನ ಯಾಕೆ ಹಿಂಸೆ ಮಾಡ್ತೇ?' ಆಗ ವೆಂಕಪ್ಪಯ್ಯ ನನ್ನನ್ನು ಅಲ್ಲಿಯೆ ಧಡಕ್ಕ ಹೊತ್ತು ಹಾಕಿ 'ಏನಂದೆ ಏನಂದೆ' ಎನ್ನುತ್ತ ಅವಳತ್ತ ನುಗ್ಗಿ, ಅವಳ ಜಡೆಬುಡಕ್ಕೆ ಕೈ ಹಾಕಿ ದರದರನೆ ಎಳೆಯುತ್ತ ಸೀದ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡ. 'ಅಯ್ಯೋ ಅಯ್ಯೋ! ಏನಪ್ಪಾ ಇದೆಲ್ಲ... ನಂಗೆ ಕಾಂಬ್‌ಗೇ ಆತಿಲ್ಲೆ, ಯೇ ಯಂಕಪ್ಪಯ್ಯ ಯಂಕಪ್ಪಯ್ಯ ಬಾಗಿಲು ತೆರೆ... ಯಂಕಪ್ಪಯ್ಯ ಅಯ್ಯೋ ಮಾರಿ ಹೆಣ್ಣೇ...' ಎಂದು ಎದೆ ಒಡೆದಂತೆ ಕೂಗಿಕೊಂಡರು ಸೀತತ್ತೆ.

ಕ್ಷಣದಲ್ಲಿ ಕೋಣೆಯ ಬಾಗಿಲು ತೆರೆಯಿತು. ಅಮ್ಮಚ್ಚಿ ಹೊರಗೆ ಬಂದಳು. ಮುಖ ಧಗಧಗಿಸುತ್ತಿತ್ತು. ತುಟಿ ಒಡೆದು ರಕ್ತವಸುರುತ್ತಿತ್ತು.

'ಅಮ್ಮಚ್ಚೀ... ರಕ್ತ!' ಹೆದರಿ ಹೆಪ್ಪಾದ ದನಿಯಲ್ಲಿ ಕೂಗಿಕೊಂಡರೆ ಅದು ಕೇಳೇ ಇಲ್ಲವೆಂಬಂತೆ ನಿಧಾನವಾಗಿ ಒಳಕೋಣೆಯತ್ತ ನಡೆಯುತ್ತಿದ್ದ ಅಮ್ಮಚ್ಚಿ ಸೀತತ್ತೆಯ ಕಡೆಗೆ ತಿರುಗಿ 'ನೀ ಸಾಯಿ, ನೀ ಯಾಕೆ ಇರ್ತ್‌ದ್? ನನ್ನ ಕೊಲ್ಲ್‌ಗಾ?' ಎನ್ನುತ್ತಾ ಬಾಗಿಲು ಹಾಕಿಕೊಂಡಳು.

ವೆಂಕಪ್ಪಯ್ಯನಿಂದ ಅತ್ಯಾಚಾರಕ್ಕೆ ಒಳಗಾದ ಅಮ್ಮಚ್ಚಿಯನ್ನು ಅವನೊಂದಿಗೆ ಮದುವೆಮಾಡಲಾಯಿತು. ತಿರುಪತಿ ಹೋಗಿ ಹೋಟೆಲ್ ಮಾಡಿಕೊಂಡಿರುತ್ತಾರೆ. ಬಹಳ ಸಮಯದ ನಂತರ ಮನೆಗೆ ಒಬ್ಬಳೆ ಬರುತ್ತಾಳೆ. ಆಗ ಸೀತತ್ತೆ 'ಏನು ರಂಡೆ ಒಬ್ಬಳೇ! ಯಂತಕತೆ ಮಾಡಿಂಡೆ?' ಎಂದರು. ಅಮ್ಮಚ್ಚಿ 'ಒಬ್ಬಳೆ ಬರದೆ ಮತ್ತೆಂತ ಮಾಡ್ತದ್ ಅಲ್ಲಿದ್ದ್? ನಿನ್ನ ಯಂಕಪ್ಪಯ್ಯ ನೇಣು ಹಾಕಿಂಡ' ಎಂದೆನ್ನುತ್ತಾಳೆ. ಅಮ್ಮಚ್ಚಿಯ ಮುಖದಲ್ಲಿ ಮೊದಲಿನ ಯಾವುದೇ ಗತ್ತು ಗಾಂಭಿರ್ಯಗಳಿರಲಿಲ್ಲ.

ಈ ಕಥೆಯ ಜೀವಾಳ ಆಡು ಭಾಷೆಯೆ ಆಗಿದೆ. ಅಲ್ಲಿರುವ ಪಾತ್ರಗಳು ತಮ್ಮ ಭಾವನೆಗಳನ್ನು ಪರಿಣಾಮಕಾರಿಯಾಗಿ ಪ್ರತಿಬಿಂಬಿಸಲು ಆ ಭಾಷೆಯೆ ಕಾರಣ. ಭಾಷೆ ಪಾತ್ರಗಳ ಜೀವಾಳವಾಗಿದೆ.

## ಭೂತ:–

ಮೀರಾ ಉಪನಯನಕ್ಕೆಂದು ದೊಡ್ಡಮ್ಮನೊಡನೆ ಬಾಡೂರಿನ ಅವರ ಮನೆಗೆ ಹೋಗುತ್ತಾಳೆ. ಅಲ್ಲಿಯ ಕತ್ತಲೆ ರಾತ್ರಿ ಕಂಡು ಮೀರಾ ಭಯಭೀತಗೊಂಡಳು. ಆ ಸಮಯದಲ್ಲಿ ಬಂದ ಪಾರ್ವತಿ 'ಬುಳ್ಪಡ, ಬುಳ್ಪಡಯ. ನಾವೆಲ್ಲಿ ಇಲ್ಲಿನ? ನಾಳೆ ಹಾಡಿಗೆ ಹೋಪ. ನಿಂಗೆ ಎಷ್ಟು ಬೇಕೋ ಅಷ್ಟು ಗೇರುಬೀಜ ಹಣ್ಣು ಎಲ್ಲ ತೆಗೆದುಕೊಡ್ತೆ. ರಂಜದ ಹೂವು ಹೆಕ್ಕುವ ನಾವು, ಸುರಿದು ದೇವಸ್ಥಾನಕ್ಕೆ ಕೊಡುವ' ಎಂದು ಹೇಳಿದಳು. ಮೀರಾನ ದೊಡ್ಡಮ್ಮನಿಗೆ ಪಾರ್ವತಿ, ಶಾಲಿ, ಯಶೋಧ ಎಂಬ ಮೂವರು ಮಕ್ಕಳು, ಶಾಲಿ ಜಗಳಗಂಟಿ, ಯಶೋಧ ಮಾತನಾಡುವುದೆ ಕಡಿಮೆ, ಪಾರ್ವತಿ ಈಕೆಯೊಂದಿಗೆ ಹೊಂದಿಕೊಂಡಿದ್ದಳು. ಪಾರ್ವತಿ ಗಂಡು ಹುಡುಗನಂತೆ ಕೆಲಸಮಾಡುತ್ತಿದ್ದಳು. ಈಜು ಕಲಿತಿದ್ದಳು, ಪ್ರತಿದಿನ ರಂಜದ ಹೂವಿನ ಹಾರಮಾಡಿಕೊಂಡು ದೇವಸ್ಥಾನಕ್ಕೆ ಹೋಗಿ ಗಳಗಳನೆ ಅಳುತ್ತಿದ್ದಳು. ಅವಳ ಈ ಮೌನದ ಅಳುವಿನಲ್ಲಿ ಅಂತರಂಗದ ನೋವಿತ್ತು. 'ಯಾಕೆ ಅಳುತ್ತೀ ಪಾರ್ವತಿ?' ಎಂದರೆ 'ಸುಮ್ಮನೆ ಉಂಡ್‌ದ್ ಜಾಸ್ತಿಯಾಯಿತು, ಅದಕ್ಕೆ!' ಎನ್ನುತ್ತಿದ್ದಳು. ಅಂತೂ ರಜೆ ಮುಗಿದು ಮೀರಾ ಮನೆಗೆ ಬಂದಳು.

ನಂತರ ಪಾರ್ವತಿಯ ಮದುವೆಗೆ ಮೀರಾನ ಅಮ್ಮ ಮಾತ್ರ ಹೋಗಿಬರುತ್ತಾರೆ. ಮೀರನಿಗೂ ಕೂಡ ಮದುವೆಯಾಗುತ್ತದೆ. ಬಹಳ ಸಮಯದ ನಂತರ ಮೀರಾ ಊರಿಗೆ ಮಕ್ಕಳನ್ನು ಕರೆದುಕೊಂಡು ಹೋದಾಗ

ಅವರಿಗೂ ದೊಡ್ಡಮ್ಮನ ಮನೆ ತೋರಿಸಬೇಕೆಂಬ ಆಸೆಯಾಗಿ ಅಮ್ಮನನ್ನು ಕರೆದುಕೊಂಡು ಹೊರಟಳು. ಬಸ್ಸಿನಲ್ಲಿ ಅಮ್ಮ ಎಂದಳು 'ಪಾರ್ವತಿ ಈಗ ಅಟ್ಟಿ ಮನೆಯಲ್ಲೇ ಇದ್ದಾಳೆ, ಗೊತ್ತಿಲ್ಲ ನಿನಗೆ–ಅಲ್ಲ?' ಮೀರನಿಗೆ ಆಶ್ಚರ್ಯವಾಯಿತು.

'ಗಂಡನಿಗೆ ಮೊದಲೇ ಒಂದು ಮದುವೆಯಾಗಿತ್ತು. ಕಡೆಗೆ ಗೊತ್ತಾದರೂ ಉಪಾಯವಿರಲಿಲ್ಲ. ಮದುವೆ ನಡೆದೇ ಬಿಟ್ಟಿತ್ತು. ಈಗ ಅವಳಿಗೆ ಎರಡು ಹೆಣ್ಣುಮಕ್ಕಳು. ನಾಕು ದಿನಕ್ಕೆಂತ ಇಲ್ಲಿಗೆ ಕಳಿಸಿದವ ನಾಪತ್ತೆ. ಮತ್ತೊಂದು ಮದುವೆಯಾಗಿರಲು ಹೋಗಿರಬೇಕು.' ಮೀರನ ಅಮ್ಮನ ಸ್ವರ ಉರಿಯುತ್ತಿತ್ತು.

'ಯಾಕೆ ಹೇಳಿದೆನೆಂದರೆ ಮತ್ತೆ ಹೋದ ಕೂಡಲೇ ಅವಳೊಡನೆ ಮಾತನಾಡುವಾಗ ಜಾಗ್ರತೆ ಇರಲಿ ಎಂತ...' ಎಂದು ಮೀರನಿಗೆ ಹೇಳಿದ್ದರು.

ಬಹಳ ದಿನದ ನಂತರ ಮೀರ ತನ್ನಿಬ್ಬರು ಮಕ್ಕಳೊಂದಿಗೆ ಅವರ ಮನೆಗೆ ಹೋಗುತ್ತಾಳೆ. ಅಲ್ಲಿ ದೊಡ್ಡಮ್ಮ ತನ್ನ ಮಗಳ ಕಥೆ ಹೇಳಿ ಬಹಳ ನೊಂದುಕೊಳ್ಳುತ್ತಾರೆ. ಮೀರಾನ ಮಗಳು ಅಳುತ್ತಿದ್ದಾಗ ಮೊದಲು ಮೀರನಿಗೆ ಸಮಾಧಾನ ಮಾಡಿದ ಹಾಗೆ 'ಬುಳ್ಪಡ ಬೋಯಿ. ಬುಳ್ಪತದ್ ದರಿದ್ರ. ನಾಳೆ ಗುಡ್ಡೆಗೆ ಹೋಪ. ಗೇರು ಬೀಜ ಎಲ್ಲ ಕೊಡ್ತೆ. ಮತ್ತೆ ರಂಜದ ಹೂವು ಹೆಕ್ಕಿ ದೇವರಿಗೆ ಕೊಡುವ. ದೇವರಿಗೆ ನಮಸ್ಕಾರ ಮಾಡಿ ಬರುವ...' ಎನ್ನುತ್ತಿದ್ದಳು. ಆದರೆ ಆಕೆಯ ಧ್ವನಿ ಮಾತ್ರ ಕುಗ್ಗಿತ್ತು. ಜೊತೆಗಾರನಿಲ್ಲದ ಬದುಕು ಅವಳನ್ನು ಕಷ್ಟದ ಕೂಪಕ್ಕೆ ದೂಡಿತ್ತು.

ಹೀಗೆ ಈ ಕಥೆ ಹೆಣ್ಣೊಬ್ಬಳ ಅಸಹಾಯಕ ಸ್ಥಿತಿ, ಕಷ್ಟನಷ್ಟಗಳನ್ನು ತಿಳಿಸುತ್ತದೆ. ಈ ಕಥೆಯಲ್ಲಿ ಅವರು ಬಳಸಿದ ಭಾಷೆ ಪಾತ್ರಕ್ಕೆ ಜೀವಂತಿಕೆಯನ್ನು ನೀಡಿ ಪರಿಣಾಮಕಾರಿ ಪ್ರಭಾವವನ್ನು ಬೀರಿದೆ.

ವೈದೇಹಿಯವರು ಕಥೆಗಳಲ್ಲಿ ಬಳಸುವ ಭಾಷೆಯಲ್ಲಿ ವೈವಿಧ್ಯತೆ ಇದೆ. ಇದಕ್ಕೆ ಕಾರಣವೇನೆಂದು ಕೇಳಿದರೆ ಲೇಖಕಿಯವರು "ಸಾಂಪ್ರದಾಯಿಕತೆ ಮತ್ತು ಆಧುನಿಕತೆಗಳ ಝಟಾಪಟಿಯ ನಡುವೆ ಹೊಸ ಭಾಷೆ ಹೊಸ ಗಾದೆ ಥಟಥಟನೆ ಹುಟ್ಟುತಿದ್ದ ಅಂಥಕಾಲದಲ್ಲಿ ಜನಿಸಿದವರಿಗೆ ಭಾಷೆಗಂತೂ ಬರಗಾಲವಿರುವುದಿಲ್ಲವಷ್ಟೆ? ಭಾವವಿಲ್ಲದೆ ಭಾಷೆ ಹೇಗೆ ಹುಟ್ಟೀತು. ಆಯಾ ಭಾವ ತನ್ನ ಗಾಢತೆಗೆ ಮತ್ತು ತಂತ್ರನ್ನ ಪ್ರಾದೇಶಿಕತೆಗೆ ತಕ್ಕನಾಗಿ ತಾನೇ ಭಾಷೆಯನ್ನು ಸೃಷ್ಟಿಸಿಕೊಳ್ಳುತ್ತದೆ. ಭಾಷಾ ವೈವಿಧ್ಯದ ಹಿಂದಿನ ಗುಟ್ಟೇ ಅದು ತಾನೆ? ಹಾಗೆ ನನ್ನಲ್ಲಿ ಅವೆರೆಡರ ಕೃಷಿ ನಡೆಯಿತು ಎನ್ನುವುದಕ್ಕಿಂತ ನಡೆಯಲ್ಪಟ್ಟಿತು ಅನ್ನುವುದೇ ಹೆಚ್ಚು ಸೂಕ್ತ. ಕುಂದಾಪುರ ತಾಲ್ಲೂಕು ತನ್ನದೇ ಅದ ವಿಶಿಷ್ಟ ಕನ್ನಡವೊಂದನ್ನು ಬೆಳೆಸಿಕೊಂಡಿದೆ. ಪ್ರಾಯಶಃ ತನ್ನ ಸಂವೇದನಾ ಕ್ರಮಕ್ಕೆ ತಕ್ಕಂತೆ ರೂಪುಗೊಳಿಸಿಕೊಂಡ ಉಪಭಾಷೆ ಇರಬೇಕು. ಮಾತಿನಲ್ಲೆ

ಅಭಿನಯದ ಭಾಷು. ಸಂಕ್ಷಿಪ್ತತೆ, ವ್ಯಂಗ್ಯ ವಿಡಂಬನೆ ನವಿರು ಹಾಸ್ಯ ಹಾಸು ಹೊಕ್ಕ, ವ್ಯಕ್ತಿತ್ವಕ್ಕೆ ಸರಿಯಾಗಿ ಬಿಸುಪು ಪಡೆಯುವ ಭಾಷೆ ಅದು. ಅದರ ನಡುವೆಯೇ ಅದನ್ನು ಆಡಿಕೊಂಡೇ ಬೆಳೆದ ನನಗೆ ಅವಶ್ಯ ಕಂಡಾಗೆಲ್ಲ ಆ ಭಾಷೆ ತಾನಾಗಿ ಭಾವವನ್ನು ಅನುಸರಿಸಿ ಬರುತ್ತ ಅಪಾರವಾಗಿ ನೆರವಾಯಿತು. 'ಅಕ್ಕು'ವಿಗೆ ಅದೇ ಬೇಕಾಯಿತು. ಆದರೆ 'ಶಕುಂತಲೆ' ಕಾವ್ಯ ಭಾಷೆಯನ್ನು ಆರಿಸಿಕೊಂಡಳು. ಇಲ್ಲವಾದರೆ ಬರೆವಾಗ ಅವರು ಕಣ್ಣುಮುಂದೆ ಕಟ್ಟಲಾರರಲ್ಲ. ಅದಷ್ಟೇ ಅಲ್ಲ, ನನ್ನ ತಾಯಿಯಿಂದ ಬಂದ ಅವಳ ತವರು ಮನೆ ಪಾಣೆ ಮಂಗಳೂರು ಹಾಗೂ ಬಂಟ್ವಾಳ ಕಡೆಯ ಕೋಟ ಬ್ರಾಹ್ಮಣರು ರೂಢಿಸಿಕೊಂಡಿರುವ ಮಲೆಯಾಳ, ತುಳು ಮಿಶ್ರ ಸೊಗಡಿನ ಕನ್ನಡವೊಂದಿದೆ. ಅದನ್ನು ನಾನು 'ಅಮ್ಮಚ್ಚಿ ಎಂಬ ನೆನಪು', 'ವಾಣಿಬಾಯಿ', 'ಹಕ್ಕಿಲ್ಲದವರು', 'ಭೂತ', 'ಯಾತ್ರೆ' ಮುಂತಾದ ಕಥೆಗಳಲ್ಲಿ ಬಳಸಿದ್ದೇನೆ. ಅಲ್ಲಿಯೂ ಆಯಾ ಪಾತ್ರಗಳು ಅಗತ್ಯಕ್ಕನುಗುಣವಾಗಿ ಆ ಭಾಷೆಯನ್ನು ತಂತಾವೆ ಆಯ್ದುಕೊಂಡಿವೆ ಎಂದೇ ನನ್ನ ನಂಬಿಕೆ" ಎಂದೆನ್ನುತ್ತಾರೆ.

## ಕುಂದಾಪ್ರ ಕನ್ನಡದಲ್ಲಿರುವ ಕನ್ನಡಕ್ಕೆ ವಿಶಿಷ್ಟ ಎನಿಸುವ ಕೆಲವು ಪದಗಳು:-

ಬೆಚ್=ಇಡು,

ಆಯ್ಕೊ=ಇರು,

ಅಡ್ಚ=ಸಮೀಪ, ಅರಿ ಕ್ರಮವಾಗಿ ಜೋಡಿಸುವುದು,

ಆವಳ್ಸ=ಆಕಳಿಕೆ,

ಎಬ್ಬು=ಓಡಿಸು,

ಎಗಲು=ಕೊಂಬೆ,

ಕೈದ್=ಕೊನೆ,

ಕೊಜ್ಲ್=ತೊದಲು,

ಗಂಟ್=ಜಾನುವಾರು,

ಗಿಂಡು=ತುರಿಕೆ,

ಚೊಂಚ್=ಮೂಲೆ,

ನೈಕೋ=ಎತ್ತಿಕೋ,

ತಾಳ್ಳ್=ಪಲ್ಯ,

ತೊಡು=ತಿನ್ನುವ ಆಸೆ,

ನ್ಯಾಲೆ=ಬಟ್ಟೆ ಒಣಗಿಸುವ ಹಗ್ಗ,

ನೀಕು=ಇಣುಕು,

ಪೌರು=ದರ್ಪ,

ಸಾಪ್=ಚಂದ,

ಹಾಂಟ್ ಹಾಕು=ಕೊಡದೆ ಮೊಸಮಾಡು.

ಕುಂದಾಪ್ರ ಕನ್ನಡದ ಸಣ್ಣ ಉದಾಹರಣೆಗಳು ಈ ಮೇಲಿನವು.

ಈ ಭಾಷೆಯಲ್ಲಿ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು 'ಮಿತವ್ಯಯಾಸಕ್ತಿ' ಎಲ್ಲಾ ಭಾಷೆಗಳ ಲಕ್ಷಣವಾಗಿದೆ. ಬಹುತೇಕ ಪದಗಳು ಇಲ್ಲಿ ಹ್ರಸ್ವರೂಪವನ್ನು ತಾಳುತ್ತದೆ. ಆಗ ಸ್ವರದ ಅರ್ಧ

ಉಚ್ಚಾರಣೆ ಸಾಮಾನ್ಯ. ವ್ಯಂಜನವೂ ಶಿಥಿಲವಾಗುತ್ತದೆ. ಹೊಡೆಯುವ ಮಂಚ>ಹಡ್ಮಂಚ, ಅಗಳು>ಅಗ್ಳ, ಕುಡಿಯಬೇಕು>ಕುಡೀಕ್, ಇಲ್ಲ>ಇಲ್ಯೇ, ಮಾಡಬಾರದು>ಮಾಡುಕಾಗ ಎಂದಾಗುತ್ತದೆ.

ಪದಾದಿಯ ಎ,ಏ,ಓ ಸ್ವರಸಹಿತವಾದ ವ್ಯಂಜನದ ಮೇಲೆ ವ,ಯ ಕಾರದ ಒತ್ತು ಅಥವಾ ಘಾತ ಇರುವುದರಿಂದ ವ್ಯಂಜನಮಿಶ್ರಿತವಾಗಿರುವಂತೆ ಭಾಸವಾಗುವುದು.

ಕೆರೆ>ಕೆರಿ, ಕೇಳುತ್ತೀಯ>ಕೇಂತ್ಯಾ,

ಕಿವಿ>ಕೈಮಿ, ಸೋಟೆ>ಸ್ವಾಟೆ

ಕೋಟ>ಕ್ವಾಟ, ತೋಟ>ತ್ವಾಟ,

ನೊಸಲು>ನೈಸ್ಲ್.

ಈ ರೀತಿಯ ಅರ್ಧ ಸ್ವರೂಪದ ಉಚ್ಚಾರಣೆಯು ದ್ರಾವಿಡ ಭಾಷೆಗಳ ಲಕ್ಷಣಗಳಲ್ಲಿ ಒಂದಾಗಿದೆ. ಆದರೆ ಗ್ರಾಂಥಿಕ ಭಾಷೆಯಲ್ಲಿ ಇದಿಲ್ಲ. ಬಹುಶಃ ಬರೆಯುವಲ್ಲಿ ಆಗುವ ಸಂದಿಗ್ಧತೆಯಿಂದ ಈ ಅರ್ಧಸ್ವರವನ್ನು ಬಿಟ್ಟಿರಬಹುದು.

ಪದಾದಿಯ ಸ್ವರ ಬದಲಾವಣೆ ಇಲ್ಲಿ ಸಾಮಾನ್ಯ.

ಕಿವಿ>ಕೆಮಿ, ಕೈಮಿ, ಹೆಸಿವೆ>ಹಸು, ಸುರಿತಿದೆ>ಸೊರಿತ್, ಚೆಲ್ಲು>ಚೊಲ್ಲು, ಹೆಸರು>ಹೊಸ್ರು, ನಗು>ನೆಗಿ, ನಡೆ>ನೆಡೆ, ಹೊರಗೆ>ಹೆರ್ಗೆ.

ದ್ರಾವಿಡ ಭಾಷೆಗಳಲ್ಲಿ ಒತ್ತಕ್ಷರದಿಂದ ಆರಂಭಗೊಳ್ಳುವ ಪದಗಳು ವಿರಳ. ಹೀಗಾಗಿ ಅನ್ಯಭಾಷೆಯಿಂದ ಅಂತಹ ಪದಗಳನ್ನು ಸ್ವೀಕರಿಸುವಾಗ ಅವನ್ನು ಸ್ವರಾದಿಯಾಗಿ ಮಾರ್ಪಡಿಸಿಕೊಳ್ಳುವುದಿದೆ. ಆದರೆ ಇಲ್ಲಿ ಅವನ್ನು ದ್ವಿತ್ವರಹಿತವನ್ನಾಗಿಸಿ ಕೊಳ್ಳಲಾಗುತ್ತದೆ. ಉದಾಹರಣೆಗೆ ಪ್ರಾಯ>ಪಿರಾಯ, ಭ್ರಾಂತು>ಬಿರಾಂತು, ಕ್ರಯ>ಕಿರಾಯ, ಸ್ಪೆಶಲ್>ಪೆಸೆಲ್, ಗ್ಲಾಸ್>ಗಿಲಾಸ್.

ಅನುನಾಸಿಕಗಳಾದ ಣ, ನ, ಮ ಗಳಿದ್ದಂತೆ ಸ, ಹ ಗಳೂ ಇಲ್ಲಿಯ ಜನರು ಮಾತನಾಡುವ ಅಭ್ಯಾಸಕ್ಕನುಗುಣವಾಗಿ ಅನುನಾಸಿಕವಾಗುವುದುಂಟು.

ಅನುಸ್ವಾರ ಸಹಿತವಾಗಿಯು, ರಹಿತವಾಗಿಯೂ ಹಳಗನ್ನಡದಲ್ಲಿರುವಂತೆ ಪದಪ್ರಯೋಗ ಇಲ್ಲಿ ಉಂಟು, ದಾಟು>ದಾಂಟು, ತೋಟ>ತ್ಯಾಂಟು, ಬೇಟೆ>ಬ್ಯಾಟಿ, ಹಬ್ಬು>ಹಂಬು, ಆಟ>ಆಂಟ ಇತ್ಯಾದಿ.

ನಿಯಮಾನುಸಾರ ಅಕ್ಷರಗಳ ಆದೇಶವಾಗುವಂತೆ ಯಥೇಚ್ಛವಾಗಿಯೂ ಅಕ್ಷರಗಳು ಬದಲಾಗುವುದುಂಟು. ಮೊಳಕಾಲು–ಮೊಣಕಾಲು ಆಗುವಂತೆ, ಕೇಳು–ಕೇಣು, ಬೆಳ್ತಿಗೆ ಅಕ್ಕಿ–ಬೆಣ್ತಕ್ಕಿ, ಇಲ್ಲೆಲ್ಲ 'ಳ' ಗೆ 'ಣ' ಆದೇಶವಾಗಿದೆ.

'ಸ' ಕಾರಕ್ಕೆ 'ಚ' ಆದೇಶವೂ ಪದಾದಿಯಲ್ಲಿ ಉಂಟು. ಸಾರ್ಚು–ಚಾಂಚು, ಸೋಗೆ–ಚೋಗೆ ಎಂದಾಗುತ್ತದೆ.

ಪದದ ಆದಿಯ 'ತ'ಕಾರ 'ಸ'ಕಾರವಾಗುತ್ತದೆ. ತೊಟ್ಟು–ಚೊಟ್ಟು, ತಿಗಣೆ–ಚೌಣಿ, ತಿರುಳು–ಚಿಕ್ಕು. ಅದರೊಂದಿಗೆ ಪದಮಧ್ಯದ 'ವ' ಕಾರ 'ಗ'ಕಾರವಾಗುತ್ತದೆ, ನೇವಳ>ನ್ಯಾಗ್ಳು. ಅಂತೆಯೇ ಥಾಂತವಾದ ಪದಮಧ್ಯದ ರಕಾರಕ್ಕೆ ಯ ಆದೇಶವೂ ಉಂಟು. ಕುರುಡ>ಕುಯ್ಡು, ಎರಡು>ಎಯ್ಡು, ಹರಡು>ಪಯ್ಡ್ ಎಂದಾಗುತ್ತದೆ. ಇಂತಹ ಸೂಕ್ಷ್ಮವಾದ ವ್ಯತ್ಯಾಸಗಳನ್ನು ಇಲ್ಲಿ ಕಾಣುತ್ತೇವೆ.

ಇನ್ನು ಅಕೃತಿಯಾ ವಿಭಾಗದಲ್ಲಿ ಪ್ರತ್ಯಯಗಳನ್ನು ಸೇರಿಸಿದ ಪದಗಳ ಉಚ್ಚಾರದಲ್ಲಿ ಇದೇನು ಹೊಸಪದವೇ? ಎಂಬ ಬೆರಗು ಹುಟ್ಟಿಸುವಷ್ಟು ವ್ಯತ್ಯಾಸಗಳನ್ನು ಕಾಣುತ್ತೇವೆ. ನಡು–ಹಳಗನ್ನಡದಲ್ಲಿ ದಿಗ್ವಾಚಕ ಪದದ ಮೇಲೆ 'ಅಲ್' ಪ್ರತ್ಯಯ ಸೇರಿದ ಮೇಲೆ ಇನ್ನೂ ಒಂದು ಪ್ರತ್ಯಯ 'ಆಯಿ' ಎಂಬುದು ಸೇರುತ್ತದೆ. ತೆಂಕಲ್+ಆಯಿ>ತೆಂಕ್ಲಾಯಿ, ಹೀಗೆಯೇ ಎತ್ಲಾಯಿ, ಮೂಡ್ಲಾಯಿ,...

ಕಾಲವಾಚಕದ ಮೇಲೆ 'ಅಳು' ಪ್ರತ್ಯಯ ಸೇರುತ್ತದೆ.

ಆಗ> ಆಗಳ್> ಆಗ್ನಿಕೆ; ಯಾವಾಗ> ಏಗ್ಳ: ಈ ವಾಗ> ಈಗ್ಲೆ.

ಕೆಲವೊಮ್ಮೆ ತೃತೀಯ ಹಾಗೂ ಸಪ್ತಮಿಯಲ್ಲಿ ಎರಡಕ್ಷರದ ಪ್ರಕೃತಿಯು ದೀರ್ಘವಾಗಿ ಪ್ರತ್ಯಯ ಸೇರುತ್ತದೆ. ಕಡೆಯಿಂದ>ಕಡೀಂದ, ಮನೆಯಲ್ಲಿ>ಮನೀಲಿ... ಸಪ್ತಮಿಯ 'ಅಲ್'ಗೆ ಪರ್ಯಾಯವಾಗಿ 'ಅಗೆ' ಪ್ರತ್ಯಯವೂ ಉಂಟು. ಮನಿಯಾಗೆ, ಮರದಾಗೆ, ಕೈಯಾಗೆ...

ಸಂಬೋಧನೆಯ ಪದಗಳಾಗಿ (ಬಹುವಚನದಲ್ಲಿ) ಹ್ವಾಯ್, ಹ್ವಾ, ಏ ಮಾರಾಯ್ರೆ, ಮಾರಾಯ್ತಿ, ಗಡೆ, ಹೆಣೆ ಇತ್ಯಾದಿ.

ನಿಷೇಧಾರ್ಥದ ಪದಗಳಲ್ಲಿ ವಿಚಿತ್ರರೂಪ ತಾಳುತ್ತದೆ. ಇಲ್ಲಿ ಎಂಬುದು ಇಲೆ, ಎಡಿಯ ಎಂಬುದು ನಿಷೇದಾರ್ಥಕ ಪದ. ಅದೇ ರೀತಿ ಹೋಯಿಲ್ಲೆ, ಬತ್ತಿಲ್ಲೆ, ಕೇಂತಿಲ್ಲೆ, ಕಾಂತಿಲ್ಲೆ, ಕೇಂಬುಕಾಗ, ಕುಣಿಕಾಗ, ತಗಂಬ್ಕಾಗ.

ಸಂಭಾವನಾರ್ಥಕದಲ್ಲಿ 'ಅಕ್ಕು' ಎಂಬುದು ಸೇರುತ್ತದೆ. ಉದಾರಹಣೆಗೆ ಕೇಳ್ಲಕ್ಕು, ನೋಡ್ಲಕ್ಕು, ಬರ್ಲಕ್ಕು, ಹಾಡ್ಲಕ್ಕು.

ವಿಧ್ಯರ್ಥದಲ್ಲಿ ಹಳೆಗನ್ನಡದಲ್ಲಿರುವಂತೆಯೇ ಗುಂ-ಕುಂ ಪ್ರತ್ಯಗಳು ಸ್ವಲ್ಪ ಬದಲಾವಣೆಯೊಂದಿಗೆ ಇಲ್ಲಿ ಆಡಲಾಗುತ್ತದೆ. ನೀವೆಲ್ಲ ಬರ್ಕ್, ಎಲ್ರೂ ತಿನ್ಕ್ ಇತ್ಯಾದಿ.

ಕಾಲದ ವಿಚಾರ ಬಂದಾಗ ಇಲ್ಲಿ ಭೂತಕಾಲ ಮತ್ತು ವರ್ತಮಾನಕಾಲ ಎಂಬೆರಡೇ ಭೇದ ಇದೆ. ಕೇಂಡೆ ಎಂಬುದು ಭೂತ ಕಾಲ ಕೇಂತೆ ಎಂಬುದು ಈಗಲೂ ನಾಳೆಗೂ ಆಗಬಹುದು.

ಹೀಗೆ ವಿಸ್ತರಿಸುತ್ತ ಹೋದರೆ ಪ್ರತ್ಯೇಕವಾದ ವ್ಯಾಕರಣ ಪುಸ್ತಕವನ್ನೇ ಬರೆಯುವಷ್ಟು ವಸ್ತು ವಿಷಯ ಇಲ್ಲಿಯ ಭಾಷೆಯಲ್ಲಿದೆ. ಈಗ ಮೇಲೆ ವಿವರಿಸಲಾದ ವಿಷಯಗಳು ಕೇವಲ ಪರಿಚಯವಾತ್ಮಕವಾದವು ಮಾತ್ರ. ಎಲ್ಲಾ ಗ್ರಾಮ್ಯಭಾಷೆಗಳಲ್ಲಿರುವ ವೈಶಿಷ್ಟ್ಯವು ಈ ಭಾಷೆಯಲ್ಲೂ ಉಂಟು. ಆದರೂ ಅನ್ಯ ಭಾಷೆಗಳ ಸೇರ್ಪಡೆ ಇಲ್ಲದ ಅಚ್ಚಗನ್ನಡಕ್ಕೆ ಅತ್ಯಂತ ಸನಿಹದಲ್ಲಿರುವ ಭಾಷೆ ಕುಂದಾಪ್ರ ಕನ್ನಡ ಎಂದೇ ಹೇಳಬಹುದು. ಇಲ್ಲಿಯ ಜನರ ಅನುಭವವು ನೂರಾರು ಗಾದೆಗಳನ್ನು ನೀಡಿದೆ. ಚಾಟೋಕ್ತಿಗಳನ್ನು ಕೊಟ್ಟಿದೆ. ವಿಶಿಷ್ಟ ಪದಗಳನ್ನು ಸೃಷ್ಟಿಸಿದೆ.

## ಮಹಿಳೆಯರ ಸ್ಥಾನಮಾನ

ವೈದೇಹಿಯವರು ತಮ್ಮ ಕಥೆಗಳಲ್ಲಿ ಕರಾವಳಿ ಪ್ರದೇಶದ ಮಹಿಳೆಯರ ಸ್ಥಿತಿಗತಿಗಳನ್ನು ತಿಳಿಸಿದ್ದಾರೆ. ಸಮಾಜದಲ್ಲಿ, ಕುಟುಂಬದಲ್ಲಿ ಮಹಿಳೆಯರ ಸ್ಥಿತಿಗತಿ, ಅವರ ಆರ್ಥಿಕ ಸ್ಥಿಥಿಯನ್ನು ಎಳೆ ಎಳೆಯಾಗಿ ತಿಳಿಸಿದ್ದಾರೆ. ವೈದೇಹಿಯವರ ಹೆಚ್ಚಿನ ಬರವಣಿಗೆಯು ಒಂದು ಸಮುದಾಯದಲ್ಲಿ ಸಂಸ್ಕೃತಿಯಲ್ಲಿ ಆಳವಾಗಿ ಬೇರುಬಿಟ್ಟಿರುವಂಥದ್ದು, 'ಅಕ್ಕು' 'ಅಮ್ಮಚ್ಚಿಯೆಂಬ ನೆನಪು' ಈ ಕಥೆಗಳಲ್ಲಿ ಭಾವ-ಭಾಷೆ-ವ್ಯಕ್ತಿತ್ವಗಳು ಬೆರೆತು ಹೋಗಿವೆ. ಲೇಖಕಿಯವರ-ಕಥೆಗಳು ಸ್ಥಳೀಯವಾಗಿದ್ದು ಹೆಣ್ಣಿನ ಸ್ಥಿತಿ-ಸಾಧ್ಯತೆ, ಸಾಮಾಜಿಕ-ಸಾಂಸ್ಕೃತಿಕ ಪಲ್ಲಟ ಮತ್ತು ಬದುಕಿನ ಮೌಲ್ಯಗಳನ್ನು ಕುರಿತ ಜಿಜ್ಞಾಸೆಗಳು ಓದುಗರನ್ನು ಆಕರ್ಷಿಸುತ್ತವೆ. ಆಪ್ತವಾಗಿ ಸಂವಾದಿಸುತ್ತಲೇ ಜೀವನದ ಸಂಕೀರ್ಣ ಆಳಗಳನ್ನು ಸ್ಪರ್ಶಿಸಿಬಿಡುವಲ್ಲಿ ಅವರ ಬರಹಗಳ ಯಶಸ್ಸಿದೆ.

ವೈದೇಹಿಯವರು ತಮ್ಮ ಬರವಣಿಗೆಯಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಇವರ ಕಥೆಗಳಾದ 'ಗುಲಾಬಿ ಟಾಕೀಸು', 'ಮರೆವು', 'ಅವಲಂಬಿತರು', 'ಅಕ್ಕು', 'ಅಮ್ಮಚ್ಚಿ', 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು', 'ಒಂದು ಬಾಗಿಲ ಸದ್ದು', 'ಅಭಾ', 'ಮನೆಯವರೆಗಿನ ಹಾದಿ' ಮೊದಲಾದ ಕಥೆಗಳಲ್ಲಿ ಸ್ತ್ರೀಯರ ಸ್ಥಿತಿಗತಿಗಳನ್ನು ತಿಳಿಸಿದ್ದಾರೆ.

### ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು:-

ಒಂದೇ ಒಂದು ರಸ್ತೆ ಇರುವ ಊರು. ಒಂದಷ್ಟು ದೊಡ್ಡವರ ಮನೆಗಳು, ಮತ್ತೊಂದಷ್ಟು ಸಣ್ಣ ಮನೆಗಳು. ಒಂದು ಊರೆನಿಸಿಕೊಳ್ಳಲು ಏನೆಲ್ಲ ಬೇಕೋ ಅದೆಲ್ಲ-ಅಂಗಡಿ ಮುಂಗಟ್ಟು, ಸರಕಾರಿ ಆಫೀಸು, ಸಣ್ಣಶಾಲೆ, ಒಂದು ಬಸ್ ಸ್ಟ್ಯಾಂಡ್, ದೇವದಾರು, ದೂಪ ಮತ್ತು ಗಾಳಿಮರಗಳೆಲ್ಲ ಇದ್ದವು.

ಊರಿಗೊಂದು ಬಯಲಿತ್ತು. ಸಂಜೆ ಹೊತ್ತು ಗಂಡಸರು ವಾಕಿಂಗ್ ಹೋಗಿ ಕುಳಿತುಕೊಳ್ಳುವ ಜಾಗವಾಗಿತ್ತು ಅದು. ಅಲ್ಲಿ ಅವರು ಊರಿನ ವಿಚಾರ ಕುರಿತು ಮಾತಾಡುತ್ತಿದ್ದರು.

ಬಯಲಿಗೆ ಹೆಂಗಸರು ಹೋಗುವ ಕಟ್ಟಳೆಯಿರಲಿಲ್ಲ. ಬಯಲಿಗೆಂದೇನು, ಅವರು ತಾವಾಗಿ ರಸ್ತೆಗೇ ಇಳಿದದ್ದಿರಲಿಲ್ಲ, ಮನೆಯಾಯಿತು, ತಾವಾಯಿತು.

ಸಂಜೆಯ ಹೊತ್ತು ಮಕ್ಕಳನ್ನು ಆಟಕ್ಕೆ-ಕಳುಹಿಸಿ, ತಾವು ಅಲಂಕರಿಸಿಕೊಂಡು ನಾಳೆಯ ಕಡುಬಿಗೆ ಕೊಟ್ಟೆ ಸೆಡುತ್ತಲೋ, ಅಕ್ಕಿ-ಉದ್ದು ಅರೆಯುತ್ತಲೋ, ಹೂಕಟ್ಟುತ್ತಲೋ ಇರುತ್ತಿದ್ದರು. ಸೂರ್ಯಕಂತಿದೊಡನೆ ದೇವರಿಗೆ ದೀಪಹಚ್ಚಿ ತಾಳ ತಟ್ಟುತ್ತಾ ಭಜನೆ ಮಾಡುತ್ತಿದ್ದರು.

ಪುರುಷಲೋಕ ಮತ್ತು ಸ್ತ್ರೀಲೋಕ ಈ ರೀತಿ ಇದ್ದಂತಹ ಆ ಊರಲ್ಲಿ ಹಿಂದೆ ಎಲ್ಲೋ ಒಮ್ಮೆ ಒಂದು ಸರ್ಕಸ್ಸು ಬಂದಿತ್ತು ಎಂದು ಹೇಳುವವರಿದ್ದಾರೆ. ಒಂದು ನಾಟಕಕಂಪೆನಿಯು ಬಂದಿತ್ತೆನ್ನುತ್ತಾರೆ. ಅದನ್ನೆಲ್ಲ ಎಷ್ಟು ಜನ ಹೆಂಗಸರು ನೋಡಿದ್ದಾರೆ ಅಂತ ಮಾತ್ರ ಹೇಳುವವರಿಲ್ಲ. ನಾಟಕದನ್ನಾದರೂ ನೋಡಿದ್ದಾರು ಸರ್ಕಸ್ಸು-ಗಿರ್ಕಸ್ಸು ಹೆಂಗಸರಿಗೆ ಹೇಳಿಸಿದ್ದೇ? ಎಂದು ಗದರಿಸಿಬಿಟ್ಟರೆ ಹಾಗೆ ಗದರಿಸಿದ ಗಂಡಸಿನ ದನಿಯಡಿ ಮುದುರಿ ಕುಳಿತುಕೊಳ್ಳುವವರಲ್ಲವೇ ಅವರೆಲ್ಲ?

ಹಲವು ವರ್ಷಗಳಿಂದ ಆ ಊರಿನಲ್ಲೊಂದು ಟೆಂಟು ಪ್ರತಿ ಆರು ತಿಂಗಳಿಗೊಮ್ಮೆ ಬಂದು ಠಿಕಾಣಿ ಹೂಡುತ್ತಿತ್ತು. ಇದು ಸ್ತ್ರೀಯರ ಸ್ಥಿತಿ ತುಸುವೇ ಸುಧಾರಿಸಿದಂತೆ ಕಂಡರು ಅದು ಎಷ್ಟರ ಮಟ್ಟಿಗೆ ಎಂಬುದು ಊಹಿಸಿಕೊಳ್ಳಬೇಕಷ್ಟೆ. ಯಾಕೆಂದರೆ ಆ ಸಿನಿಮಾಗಳನ್ನು ನೋಡಲು ಅವರು ಗಂಡಸರನ್ನೇ ಅವಲಂಬಿಸಿರಬೇಕಾಗಿತ್ತು. ಗಂಡಸರು ಎಲ್ಲಾದರೂ ಪ್ರಸನ್ನರಾದರೆ ಅವರನ್ನು ಸಿನಿಮಾಕ್ಕೆ ಒಯ್ಯುತ್ತಿದ್ದರು. ತಾವಾಗಿ ಹೋಗುವುದನ್ನು ಸ್ವತಃ ಹೆಂಗಸರೇ ಒಪ್ಪುತ್ತಿರಲಿಲ್ಲ. ಗಂಡುಬಲವಿಲ್ಲದಿದ್ದರೆ ಅವರು ರಸ್ತೆಗೂ ಇಳಿಯುತ್ತಿರಲಿಲ್ಲ ಗಂಡಸರು ಅವರನ್ನು ಕರೆದುಕೊಂಡು ಹೋಗಿ ಟಿಕೆಟ್ ತೆಗೆಸಿಕೊಟ್ಟು. ಹೆಂಗಸರ ಗೇಟಿನ ಬಳಿ ಆ ಟಿಕೇಟುಗಳನ್ನು ಹರಿಸಿ. ಮುಚ್ಚಟೆಯಾಗಿಕೂರಿಸಿ ಸಿನಿಮಾ ಮುಗಿದ ಮೇಲೆ ವಾಪಾಸು ಕರೆದುಕೊಂಡು ಬರುತ್ತಿದ್ದರು.

ಹೀಗೆ ಹೆಂಗಸರು ಗಂಡಂದಿರ ಅಧೀನದಲ್ಲೇ ಇದ್ದರು. ಆದರೆ ಇವರಲ್ಲಿ ಸ್ವಲ್ಪ ಬದಲಾವಣೆ ಬಂದು ಸ್ವಲ್ಪ ಮಟ್ಟಿನ ಸ್ವತಂತ್ರರಾದದ್ದು ಚಂದ್ರಪ್ಪ ಊರಿನಲ್ಲಿ ಟಾಕೀಸುಕಟ್ಟಿಸಿದಾಗ. ಈತ ಗುಲಾಬಿಯ ದತ್ತುಮಗ. ಗುಲಾಬಿ ಬಹಳ ಹಿಂದೆ ಬೊಂಬಾಯಿಗೆ ಓಡಿಹೋಗಿದ್ದಳು. ಊರಿನ ಮೇಲಿನ ಮೋಹ ಆಕೆ ಪ್ರತಿವರ್ಷ ಊರಿಗೆ ಬರುವಂತೆ ಮಾಡುತ್ತಿತ್ತು. ಮೋರೆಬೇರೆ ಮೈ ಬೇರೆ ಕಾಣುವಂತೆ ಪೌಡರು ಬಳಿದುಕೊಂಡು. ಗುಂಗುರುಗಳನ್ನು ಹಣೆಯ ಮೇಲೆಲ್ಲ ಪಸರಿಸಿಕೊಂಡು ಒಮ್ಮೆ ಕೈ ಬೀಸಿ ಊರೆಲ್ಲ ತಿರುಗುತ್ತ ಮತ್ತೆ ಬೊಂಬಾಯಿಗೆ ಮರಳುತ್ತಿದ್ದ ಆಕೆಗೆ ಊರುಮನೆಯಲ್ಲಿ ತನ್ನದೊಂದು ಸೇವೆ ನಡೆಯಬೇಕೆಂದು ಆಸೆಯುಂಟಾಯಿತು. ಅದರ ಫಲ, ಈ ಟಾಕೀಸು.

ಊರಿನಲ್ಲೊಂದು ಟಾಕೀಸು ಬಂತಲ್ಲ ಎಂದು ಕೆಲವರು ಸಂತೋಷಪಟ್ಟರು. ಕೆಲವು ಹಿರಿಯರು ಊರಿನ ಹೆಣ್ಣುಮಕ್ಕಳು ಹಾಳಾಗುತ್ತಾರೆಂದು ಸಂಕಟಪಟ್ಟರು.

ಈ ಊರಿನಲ್ಲಿ ಸೂಲಗಿತ್ತಿಯಾಗಿ ಲಿಲ್ಲಿಬಾಯಿ ಕೆಲಸ ಮಾಡುತ್ತಿದ್ದಳು. ಇವಳ ಗಂಡ ಕಲಾಯಿ ಹಾಕುವ ಕೆಲಸ ಮಾಡುತ್ತಿದ್ದ. ಈತ ದುಡ್ಡು ಮಾಡುವುದರಲ್ಲಿ ದಡ್ಡ. ಈಕೆಗೆ ಮುಂಚಿನಿಂದಲೂ ಬೇಗ ಶ್ರೀಮಂತಳಾಗಬೇಕೆಂದು ಆಸೆ ಇತ್ತು. ಊರಿನಲ್ಲಿ ಟಾಕೀಸು ಬಂದಾಗ ಹೆಚ್ಚು ಸಂತೋಷಪಟ್ಟವಳೆಂದರೆ ಈಕೆಯೇ.

ಟಾಕೀಸ್ ಆರಂಭವಾದಾಗ ಲಿಲ್ಲಿಬಾಯಿ ಹೆಂಗಸರ ಕಡೆಯ ಗೇಟ್ ಕೀಪರ್ ಆಗಿ ನೇಮಕಗೊಂಡಳು. ಟಾಕೀಸು ಬಂದ ನಂತರ ದಿನೇ ದಿನೇ ಬಳೆ ಅಂಗಡಿಯಲ್ಲಿ ನಾನಾ ತರಹದ ಪೌಡರು ಡಬ್ಬಿಗಳು ಮತ್ತಿತರ ಪ್ರಸಾಧನಗಳು ಹೊಸದಾಗಿ ಬರಲು ಪ್ರಾರಂಭಿಸಿ ಅಂಗಡಿಯವರ ಬಿಸಿನೆಸ್‌ಕುದುರಿತು. ಹೊಸ ಪ್ಯಾಶನ್ ಬಂದಿತು. ಉಡುಗೆಯ ಲೋಕದಲ್ಲಿ ಅಲ್ಲೋಲ ಕಲ್ಲೋಲವಾಗಿ ಅದು ಹೆಂಗಸರ ಅಲಂಕಾರ ಮತ್ತು ಮದುವಗಳ ಅಲಂಕಾರಗಳನ್ನು ಸಿನಿಮಾಗಾಳಿ ಸವರಿತ್ತು. ಸಿನಿಮಾ ನೋಡಲು ಹೋಗುವುದಕ್ಕಾಗಿ ಹೆಂಗಸರು ಮುಟ್ಟಾಗುವುದನ್ನೇ ಕಾಯುತ್ತಾ ಮಡಿ–ಮೈಲಿಗೆಯ ಪರಿಧಿಯಲ್ಲಿ ಮನರಂಜನೆಯನ್ನು ಪಡೆಯುತ್ತಿದ್ದರು.

ಟಾಕೀಸಿನ ಮ್ಯಾನೇಜರ್ ಕೊರತಿಯೊಂದಿಗೆ ಹೊಂದಿದ ಅನೈತಿಕ ಸಂಬಂಧಗಳನ್ನು ಲಿಲ್ಲಿಬಾಯಿ ಊರಿಗೆಲ್ಲ ತಿಳಿಸುತ್ತಾಳೆ. ಇದರಿಂದ ಕೋಪಗೊಂಡ ಆತ ಲಿಲ್ಲಿಬಾಯಿಯ ವ್ಯವಹಾರಕ್ಕೆ ಕಡಿವಾಣ ಹಾಕುತ್ತಾನೆ. ಹೀಗೆ ಇವರಿಬ್ಬರ ನಡುವೆ ಶೀತಲ ಸಮರ ನಡೆಯುತ್ತಿತ್ತು. ಚಂದ್ರಪ್ಪ ಊರಿಗೆ ಬಂದಾಗ ಮ್ಯಾನೇಜರ್‌ನ ಅನೈತಿಕ ಸಂಬಂಧ ತಿಳಿದು ಆತನನ್ನು ವಜಾ ಮಾಡಿದ. ನಂತರ ಟಾಕೀಸನ್ನು ಮಾರಿದನು. ಅಲ್ಲಿ ನರ್ಸಿಂಗ್ ಹೊಂ ಕಟ್ಟಿಸುತ್ತಿದ್ದ ಡಾಕ್ಟರನಿಗೆ 'ಗುಲಾಬಿಯ ಹೆಸರಲ್ಲಿ ಒಂದು ಸ್ಪಷಲ್ ರೂಂ ಇರಲಿ. ಅವಳ ಸೇವೆಗಾಗಿ'– ಎಂದು ಅದಕ್ಕೆ ಬೇಕಾದಷ್ಟು ದುಡ್ಡು ಕೊಟ್ಟು ಉಳಿದದ್ದನ್ನು ಕಟ್ಟಿಕೊಂಡು ಹೊರಟುಹೋದನು.

ಲಿಲ್ಲಿಬಾಯಿ ಕೆಲಸವನ್ನು ಕಳೆದುಕೊಂಡಳು. ಗುಲಾಬಿ ಟಾಕೀಸು ಮರೆಯಾಯಿತು. ಆದರೆ ಈ ಟಾಕೀಸು ಊರಿನಲ್ಲಿ ಒಂದು ಸಂಚಲನವನ್ನೇ ಮೂಡಿಸಿ ಮಹಿಳೆಯರಿಗೆ ತಮ್ಮ ಸ್ಥಿಗತಿಗಳ ಅರಿವನ್ನು ಮೂಡಿಸಿತು.

ಈ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕಥೆ ಸ್ತ್ರೀಯ ಸ್ಥಿತಿಗತಿ ಮತ್ತು ಅವರಲ್ಲಾದ ಬದಲಾವಣೆಯನ್ನು ತಿಳಿಸುತ್ತದೆ.

'ಅವಲಂಬಿತರು' ಕಥೆಯಲ್ಲಿ ಸ್ತ್ರೀಯ ಸ್ಥಿತಿಗತಿಯನ್ನ ಲೇಖಕಿ ತುಂಬಾ ಚೆನ್ನಾಗಿ ವಿವರಿಸಿದ್ದಾರೆ. ಬಡಹೆಣ್ಣುಮಗಳೊಬ್ಬಳು ಅನುಭವಿಸುವ ಕಷ್ಟ ಹಾಗೆಯೆ ಮೈನೆರೆದ ಮೇಲೆ ಆಕೆಯ ಸ್ವಾತಂತ್ರಕ್ಕೆ ದಕ್ಕೆ

ಬರುವುದನ್ನು ತಿಳಿಸುತ್ತಾರೆ. ಸೂಚಮ್ಮನ ಮಗಳು ಅಹಲ್ಯ. ಆಕೆ ಇನ್ನು ಮೈ ನೆರೆದಿರಲಿಲ್ಲ ಸೂಚಮ್ಮನಿಗೆ ಅದೇ ಚಿಂತೆ. ಇದು ಬಹುಶಃ ಆಗುವುದೇ ಇಲ್ಲವೆಂತ. 'ಯಾರಾದರೂ ಪುಣ್ಯಾತ್ಮರು ಮಾಡಿಸಿದರೆ ಆಗುತ್ತಿತ್ತು' ಎಂದು ಸೂಚಮ್ಮ ಹೇಳುತ್ತಾರೆ. ಆಗ ಶಾರದ ನನ್ನೊಡನೆ ಬರಲಿ, ನಾನು ಮಾಡಿಸುತ್ತೇನೆ. ನಂಗೂ ಹೇಗೂ ಮಗು ನೋಡಿಕೊಳ್ಳಲು ಒಂದು ಜನ ಬೇಕು ಎಂದೆನ್ನುತ್ತಾರೆ. ಜೊತೆಗೆ ಅಹಲ್ಯಳನ್ನು ಮನೆಗೆ ಕರೆದುಕೊಂಡುಬರುತ್ತಾರೆ. ಹೀಗೆ ಅಹಲ್ಯ ಶಾರದೆಯ ಮನೆಗೆ ಬರಲು ಕಾರಣವಾದದ್ದು ಒಂದು ಬಡತನವಾದರೆ, ಮತ್ತೊಂದು ಆಕೆ ಇನ್ನು ದೊಡ್ಡವಳಾಗದೇ ಇದ್ದದ್ದು.

ಶಾರದೆ ಅಹಲ್ಯನನ್ನು ಕುರಿತು "ಮೈ ನೆರದ ಮೇಲೆ ಇಟ್ಟು ಕೊಳ್ಳುವುದಿಲ್ಲಪ್ಪ. ನಂಗೆ ಒಂಥರ ಭಯ. ಯಾರನ್ನಂತ ಕಾಯುವುದು? ಯಾರನ್ನು ನಂಬುವಂತಿಲ್ಲ ಅಲ್ಲವ?" ಎಂದು ತನ್ನ ಸ್ನೇಹಿತೆಯಾದ ಸುಶೀಲನಿಗೆ ಹೇಳುತ್ತಾರೆ. ಮೈನೆರೆದ ಮೇಲೆ ಹೆಣ್ಣು ಸ್ವತಂತ್ರಳಾಗಿ ಇರುವುದಕ್ಕೆ ಅನರ್ಹಳು ಎಂಬಂತೆ ಶಾರದೆ ಮಾತನಾಡುತ್ತಾಳೆ. ಶಾರದೆ ಅಹಲ್ಯಳಿಗೆ ಯಾವುದೇ ರೀತಿಯ ಸಂಬಳವನ್ನು ನೀಡುತ್ತಿರಲಿಲ್ಲ. ಹೀಗಾಗಿ ಆಕೆಗೆ ಸ್ತ್ರೀಸಹಜವಾದ ಸೌಂದರ್ಯವರ್ಧಕ ವಸ್ತುಗಳನ್ನು ಕೊಳ್ಳಲು ಸಹ ಹಣವಿಲ್ಲದೆ ಸುಶೀಲಳನ್ನು ಕೇಳುವಂತಾಯಿತು.

ಅಹಲ್ಯ ಒಂದು ದಿನ ದೊಡ್ಡವಳಾಗುತ್ತಾಳೆ. ಅಲ್ಲಿಯೇ ಇದ್ದ ಸುಶೀಲ ಆಕೆಗೆ ಎಲ್ಲಾ ಹೇಳಿಕೊಟ್ಟು, ಡ್ರೆಸ್ಸು ಬದಲಾಯಿಸಿ ಒಗೆದು ಹಾಕಿ ಬಿಡು ಎಂದೆನ್ನುತ್ತಾಳೆ.

ಸಂಜೆ ಬಂದ ಶಾರದೆ "ಅದು ಮುಟ್ಟಂತಲ್ಲ ಮಾರಾಯ್ತಿ" ಎಂದಳು. "ಇನ್ನು ನಂಗೆ ಬೇಡವಪ್ಪ. ಮಿಂದು ಒಳಗೆ ಬಂದದ್ದೇ ಕಳಿಸಿಬಿಡುತ್ತೇನೆ".

ಸುಶೀಲ "ಯಾಕೆ ಅಷ್ಟು ಹೆದರಿಕೆ?" ಎನ್ನುತ್ತಾಳೆ.

"ಹೆದರಿಕೆಯ! ಸೆರಗಲ್ಲಿ ಬೆಂಕಿಕಟ್ಟಿಕೊಂಡ ಹಾಗಲ್ಲವ ಇನ್ನು?" ಎಂದು ಶಾರದೆ ಹೇಳುತ್ತಾಳೆ. ಕೊನೆಗೆ ಅಹಲ್ಯಳನ್ನು ಸಂಬಳ ನೀಡದೆ ಹಳೆಯ ಸೀರೆಯನ್ನು ಕೊಟ್ಟು ಕಳುಹಿಸುತ್ತಾಳೆ.

ಇಲ್ಲಿ ಲೇಖಕಿ ಹೆಣ್ಣಿನ ಬಡತನದ ಪರಿಸ್ಥಿತಿಯನ್ನು ಹಾಗೂ ಹುಡುಗಿ ದೊಡ್ಡವಳಾಗುವುದೇ ಅಪರಾಧವೆಂಬಂತೆ ಕಾಣುವ ಜನರ ಮನೋಸ್ಥಿತಿಯನ್ನು ತಿಳಿಸಿದ್ದಾರೆ.

'ಅಮ್ಮಚ್ಚಿಯೆಂಬ ನೆನಪು' ಎಂಬ ಕಥೆ ಒಬ್ಬ ತಂದೆಯಿಲ್ಲದ ಎಳೆಯ ಹುಡುಗಿ ಅಮ್ಮಚ್ಚಿಯ ಕುರಿತದ್ದು. ಆಕೆ ಬಂಡಾಯದ ಅರಿವನ್ನು ಒಳಗಿಟ್ಟುಕೊಂಡಿರುವವಳು. ಗಟ್ಟಿಯಾಗಿ ವೈಯುಕ್ತಿಕತೆಯಿರುವವಳು.

ಸೀತತ್ತೆಯ ಒಬ್ಬಳೇ ಮಗಳು ಅಮ್ಮಚ್ಚಿ. ತಂದೆ ಸಾಯುವಾಗ ಅಮ್ಮಚ್ಚಿಗೆ ಇನ್ನೂ ಆರು ತಿಂಗಳು. ಸೀತತ್ತೆಯ ಸ್ಥಿತಿ ಹೀಗಾದ್ದರಿಂದ ವೆಂಕಪ್ಪನನ್ನು ಅಲ್ಲಿ ಇಲ್ಲಿ ಹೋಗಲು, ಅದು ಇದು ತರಲು ಇರಿಸಿಕೊಂಡಿದ್ದರು. ಆಗಿನ್ನು ಅವನಿಗೆ 12 ವರ್ಷ. ಯಾರಿಲ್ಲದ ಈತ ಇದು ತನ್ನ ಮನೆಯೆ ಎಂಬಂತೆ ಇದ್ದುಬಿಟ್ಟ. ಜೊತೆಗೆ ಅಮ್ಮಚ್ಚಿಯ ಹಕ್ಕುದಾರನು ತಾನೇ ಎಂಬಂತಾದ.

ಶಂಭಟ್ಟರ ಮನೆಯ ಸತ್ಯನಾರಾಯಣ ಪೂಜೆಗೆಂದು ಅಮ್ಮಚ್ಚಿ ವಾರೆ ಬೈತಲೆ ತೆಗೆದು ಎರಡು ಜಡೆ ಕಟ್ಟಿಕೊಂಡು ಹೊರಟಳು. ದಾರಿಯಲ್ಲಿ ಸಿಕ್ಕಿದ ವೆಂಕಪ್ಪಯ್ಯ "ಏನಿಯ? ಇದೇನಿಯ ಯೇಸ, ಬೊಂಟಾಯಿ ಲೇಡಿಯ ಹಂಗೆ, ವಾರೆ ಬಕ್ತಲೆ! ಶಿ... ಶಿ... ನಡೆ ಮನೆಗೆ. ಸರಿಯಾಯಿ ಬಾಚಿಂಡು ಹೋವು" ಎಂದೆನ್ನುತ್ತಾನೆ. ಇವನ ಮಾತು ಲೆಕ್ಕಕ್ಕೆ ತೆಗೆದುಕೊಳ್ಳದೆ ಆತನಿಗೆ ಬೈದು ಅಮ್ಮಚ್ಚಿ ಹೋಗುತ್ತಾಳೆ.

ಒಂದು ದಿನ ಅಮ್ಮಚ್ಚಿ ಪೇಟೆಗೆ ಹೊರಡುತ್ತಾಳೆ. ನಾನೇ ಮನೆಗೆ ಬೇಕಾದ ಸಾಮಾನುಗಳನ್ನು ತರುತ್ತೇನೆಂದು ಅಮ್ಮನಿಗೆ ಹೇಳುತ್ತಾಳೆ. ಪೇಟೆಗೆ ಹೊರಟ ಅಮ್ಮಚ್ಚಿಯನ್ನು ವೆಂಕಪ್ಪಯ್ಯ ತಡೆದು "ಏನು ಯೇಸ ತಕಂಡು ಹೋತ ಪೇಟೆಯವ್ವ ಹಂಗೆ! ಶ್ಯೇಕ್ಕ್ss... ಎದೆ ಎರಡೂ ಕಾಣ್ತ ಹಂಗೆ ಪಟ್ಟಿ ಸೆರಗು ಹಾಸಿಂಡು ಹೊರಟೆಯಲ್ಲ! ಯಾರ ಮಾರ್ಯಾದೆ  ತೆಗೆಗೆ?" ಎಂದೆನ್ನುತ್ತಾನೆ. ಆಗ ಅಮ್ಮಚ್ಚಿ 'ನಾ ನಂಗೆ ಬೇಕಾದ ಹಂಗೆ ಹೊರಟರೆ ನಿಂಗೆ ಯಾಕೆ ಕಿಚ್ಚು?' ಎನ್ನುತ್ತಾಳೆ.

ವೆಂಕಪ್ಪಯ್ಯ ಸೀತತ್ತೆಯನ್ನು ಕರೆದ! "ಹಿಂಗೆಲ್ಲ ಮಾಡಿಂಡ್ ಇವಳು ಪೇಟೆಗೆ ಹೊತಡ್ತ್‌ದ್, ಬಾಸಾಯಿ ತಿಂತ್‌ದ್, ಯಾಕೆ ಬೇಕಾಯಿ ಈಗ! ಪೇಟೆ ಸಾಮಾನು ಬೇಕಾರೆ ನಾನು ಕೊಣಂದ್ ಕೊಡ್ತಿಲ್ಲಯ?' ಮುಂತಾಗಿ ಹೇಳುತ್ತ ಹೇಳುತ್ತ ಕಡೆಯ ಬಾಣವಾಗಿ 'ನಿಮಗೆ ಗೊತ್ತಿಲ್ಲೆ, ಇವಳು ಪೇಟೆ ಅಂದ್ ಹೋತ್‌ದ್ ಆ ಶಂಭಟ್ಟರ ಮನೆಗಲ್ಲ? ಅವರ ಮನೆ ಜಗಲಿ ಕಾಸ್ತ್‌ದ್, ಬಾಯಿ ಕಳ್ತ್ ನಗಾಡ್ತ್‌ದ್. ಅವು ಇವಳ ಹಲ್ಲೆಲ್ಲ ಲೆಕ್ಕ ಮಾಡಿಂತೋ" ಎನ್ನುತ್ತಾನೆ.

ವೆಂಕಪ್ಪಯ್ಯನ ಮಾತು ಕೇಳಿ ಸೀತತ್ತೆ ಕೋಪಗೊಂಡರು. ಅಮ್ಮಚ್ಚಿಯನ್ನು ಕುರಿತು "ಪೌದ್ದ ಹೆಣ್ಣೆ, ಹಿಂಗಾ ಇಚಾರ?" ಎನ್ನುತ್ತಾರೆ ಸೀತತ್ತೆ. ಇದು ಸುಳ್ಳೆಂದು ಅಮ್ಮಚ್ಚಿ ವಾದಿಸಿದಾಗ ಸೀತತ್ತೆ "ಅಯ್ಯೋ... ಹೆಚ್ಚು ವಾದ ಮಾಡಲೆ ಮಾರಾಯ್ತೀ ಮಾರಾಯ್ತೀ, ಇನ್ನು ಹೆಚ್ಚುವಾದ ಮಾಡಳೆ. ಯೆಂಕಪ್ಪಯ್ಯನೂ ಇಲ್ಲದೇ ಹೋದ್ರೆ ಆಗ ಗೊತ್ತಾಕ್ಕ್ ನಿಂಗೆ ನಮ್ಮ ಅವಸ್ಥೆ ಏನ್ ಅಂದ್..." ಅಂತೆಲ್ಲ ಅವನ ಎದುರಿಗೇ ಕಿರುಚುತ್ತ,

ಹೊರಟುನಿಂತ ಅಮ್ಮಚ್ಚಿಯನ್ನು ಅಕ್ಷರಶಃ ಒಳಗೆ ನೂಕಿದರು. ಇದರಿಂದ ನಿರಾಸೆಹೊಂದಿದ ಆಕೆ ತನ್ನ ಕೆಲಸದಲ್ಲಿ ತೊಡಗಿ ಕೊಳ್ಳುತ್ತಾಳೆ.

ಅಮ್ಮಚ್ಚಿ ದೇವಸ್ಥಾನಕ್ಕೆ ಎಂದು ಅಮ್ಮನಿಗೆ ಸುಳ್ಳುಹೇಳಿ ರಮಾ ಟೀಚರ್ ಮನೆಗೆ ಹೋಗುತ್ತಾಳೆ. ಹಿಂದುಗುಬ್ಬಿಯ ರವಕೆ ಹೊಲಿದುಕೊಡುವಂತೆ ಹೇಳುತ್ತಾಳೆ. ಅದಕ್ಕೆ ರಮಾ ಟೀಚರ್ "ಅಲ್ಲವನ ಅಮ್ಮಚ್ಚಿ, ಬ್ಯಾಕ್ ಬಟನ್ ಬ್ಲೌಸ್ ಹೊಲಿಯಬಹುದು ಕಷ್ಟವಲ್ಲ, ಆದರೆ ವೆಂಕಪ್ಪಯ್ಯ ಕೊನೆಗೆ ನನಗೆ ಬಂದು ಗಲಾಟೆ ಮಾಡಿದರೆ? ಅವನಿಗೆ ಇದೆಲ್ಲ ಖುಶಿ ಇದ್ದಹಾಗೆ ಕಾಣುವುದಿಲ್ಲ..." ಎಂದರು. ಅಂತೂ ರಮಾಟೀಚರ್ ರವಕೆ ಹೊಲಿದುಕೊಡುತ್ತಾರೆ.

ವೆಂಕಪ್ಪಯ್ಯ ಒಮ್ಮೆ ತಿರುಪತಿಗೆ ಹೊರಡುತ್ತಾನೆ. ಪ್ರತಿವರ್ಷವೂ ಈತ ತಿರುಪತಿಗೆ ಹೋಗುತ್ತಾನೆ. ಅವನಿಲ್ಲದ ಸಮಯದಲ್ಲಿ ಅವನ ಕೋಣೆಗೆ ಹೋಗಿ ಅವನ ಶರ್ಟ್ ತೆಗೆದುಕೊಂಡು ಅದರ ಹಿಂಬಾಗ ಕೊಯ್ದಳು, ಮುಂಬಾಗದ ಗುಂಡಿಗಳನ್ನು ಹಿಂಬಾಗಕ್ಕೆ ಇಟ್ಟು ಹೊಲಿದಳು, ತಿರುಪತಿಯಿಂದ ವಾಪಸು ಬಂದ ವೆಂಕಪ್ಪಯ್ಯ ತನ್ನ ಶರ್ಟನ್ನು ನೋಡಿ ಕೋಪಗೊಂಡನು. ಅಮ್ಮಚ್ಚಿಯ ಮೇಲೆ ದೌರ್ಜನ್ಯವೆಸಗಿದನು.

ಕೊನೆಗೂ ಅಮ್ಮಚ್ಚಿ ಯಾವಾಗಲೂ ದ್ವೇಷಿಸುತ್ತಿದ್ದ ವೆಂಕಪ್ಪಯ್ಯನೊಂದಿಗೆಯೇ ಮದುವೆಯಾಯಿತು. ಅವಳ ಅಸಹಾಯಕ ಸ್ಥಿತಿಯೇ ಆಕೆ ತನಗೆ ಇಷ್ಟವಿಲ್ಲದವನೊಂದಿಗೆ ಜೀವನ ಸಾಗಿಸುವಂತಾಯಿತು.

'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಎಂಬ ಕಥೆಯಲ್ಲಿ ಲೇಖಕಿ ಅಂದು ಸ್ತ್ರೀಯೊಬ್ಬಳು ಜನರದೃಷ್ಟಿಯಲ್ಲಿ ಹೇಗಿರಬೇಕೆಂಬುದನ್ನು ತಿಳಿಸುತ್ತಾರೆ.

ವಾಗತ್ತೆ ತನ್ನ ಮೊಮ್ಮಗಳ ಮದುವೆಯಾದ್ದರಿಂದ ಬಂದವರನ್ನೆಲ್ಲ ಬಹಳ ಸಂತೋಷದಿಂದ ಸ್ವಾಗತಿಸುತ್ತಾಳೆ. ಅವಳ ಆಚೆ ಈಚೆ ಹಿಂದೆ ಅವಳಂತೆಯೇ ಹಣೆಗೆ ಬೊಟ್ಟಿಲ್ಲದ, ಕರಿಮಣಿಯಿಲ್ಲದ, ಬೋಳು ತಲೆಯ ಮೇಲೆ ಹಾಸಿದ ಕೆಂಪು ಸೆರಗಿನ, ಯಾವ ಉಪಚಾರವಿಲ್ಲದೆ ಸುಕ್ಕುಗಟ್ಟಿ ನಿವೃತ್ತರಾದ, ಮಂಟಪಕ್ಕೆ ಇನ್ನು ಅಜೀವ ಪರ್ಯಂತ ರಂಗೋಲಿ ಬರೆಯಬಾರದ, ಮಂಟಪದ ಬಳಿ ಸುಳಿಯಲೂ ಕೂಡದ, ಗಂಡಸರ ಕಣ್ಣಿಗೆ ಬೀಳದ ಜಾಗದಲ್ಲಿ ಕುಳಿತು ಮದುವೆ ಕಾಣಬೇಕಾದ, ಮುತ್ತತ್ತೆ, ಕಾಟಜ್ಜಿ, ಹೆಬ್ಬಾಗಿಲಜ್ಜಿ, ಸರಸಜ್ಜಿ ಮುಂತಾದವರು ಕುಳಿತಿದ್ದಾರೆ, ಹೀಗೆ ಲೇಖಕಿ ವಿಧವೆಯರ ಚಿತ್ರವನ್ನು ನೀಡುತ್ತಾರೆ. ವಿಧವೆಯೆಂದರೆ ಆಕೆ ಅಪಶಕುನದ ಸಂಕೇತ ಹಾಗಾಗಿ ಆಕೆ ಯಾವುದೇ ಶುಭಕಾರ್ಯಕ್ಕೆ ಹೋಗುವಂತಿಲ್ಲ, ಅಲ್ಲಿಯ ಕೆಲಸ ಕಾರ್ಯಗಳನ್ನು ಮಾಡುವಂತಿಲ್ಲ.

ವಿಧವೆಯರೆಂದು ಸಮಾಜದಿಂದ ಅಸಡ್ಡೆಗೆ ಒಳಗಾಗಿದ್ದರು ಅವರು ಸಂಪ್ರದಾಯವನ್ನು ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬಂದಿದ್ದಾರೆ. ಆಹಾರ ಕ್ರಮ, ಉಡುಗೆ–ತೊಡುಗೆ ಎಲ್ಲದರಲ್ಲೂ ಸಂಪ್ರದಾಯವೆ. ಮದುವೆಯಲ್ಲಿ ರಾಮರಾಯರ ಮಗಳು ತೋಳಿಲ್ಲದ ರವಿಕೆಯಲ್ಲಿ ಬಂದದ್ದು ಹೆಬ್ಬಾಗಿಲಜ್ಜಿಗೆ ನರಕ್ ನರಕ್ ಎನಿಸಿದೆ. ಅವಳ ಸಂಬಂಧಿ ಮುತ್ತಜ್ಜಗಂತೂ 'ಹಸಿ ಕೆಸರು ಮೆಟ್ಟಿದ ಹಾಗಾಗಿದೆ' ಆದರೆ ಇವರದೆಲ್ಲ ಕ್ಯಾರೆ ಇಲ್ಲವೆಂಬಂತಿರುವ ಅವಳನ್ನು ಇತರ ಹುಡುಗಿಯರು ಮತ್ತೆ ಮತ್ತೆ ನೋಡುತ್ತಿದ್ದಾರೆ. ಮತ್ತೆ ಯಾರೋ ಒಬ್ಬಳು – ಕೋಡಂಗಿ ಎಂಬ ಬಿರುದನ್ನು ಅವಳಿಗೆ ತಿಳಿಯದೆ ಪಡೆದಿದ್ದಾಳೆ. ಪ್ರತಿಯೊಬ್ಬರು ಕನ್ನಡಿಯ ಮುಂದೆ ಮೈಮರೆತ ರೀತಿ ಹಳೆಯದರ ನೆನಪನ್ನು ಹಳೆಯವರಿಗೆ ಕೆದಕಿ ಕೊಡುವಂತಿದೆ. ನಮ್ಮ ಕಾಲದ ಮದುವೆಯ ಅಪ್ಪಟ ಪರಿಮಳವನ್ನು ಎಳೆದು ತರುವಂತಿದೆ. ಅವರೆಲ್ಲರೂ ಸಾಮೂಹಿಕ ನಿರ್ಧಾರಕ್ಕೆ ಬಂದಿದ್ದಾರೆ; 'ಇನ್ನು ಬದುಕಿದರೆ ಕಷ್ಟವೇ' ಮತ್ತು 'ಈಗಿನ ಅಬ್ಬೆಯಂದಿರಿಗೆ ಬುದ್ದಿ ಇಲ್ಲ. ಜುಟ್ಟು ಬಗ್ಗಿಸಿ ಬುದ್ಧಿ ಕಲಿಸುವುದು ಬಿಟ್ಟು!...'

ಹಳೆಯ ಕಾಲದ ಗೊಡ್ಡು ಸಂಪ್ರದಾಯಕ್ಕೆ ಕಟ್ಟುಬಿದ್ದ ಕೆಲವು ಜನರು ಇಂದಿನ ಕಾಲದ ಹೆಣ್ಣೊಬ್ಬಳು ತನಗೆ ಬೇಕಾದ ರೀತಿ ಸ್ವತಂತ್ರವಾಗಿ ಇರಲು ಅಡ್ಡಿಪಡಿಸುತ್ತಿದ್ದಾರೆ.

ಹೆಬ್ಬಾಗಿಲಜ್ಜಿ ತಲೆಯ ಸೆರಗನ್ನು ಬಿಗಿಯಾಗಿ ಎಳೆದು ಕಿಂವಿಯ ಹಿಂದುಗಡೆ ಸಿಗಿಸಿಕೊಳ್ಳುತ್ತ "ಹದಿನಾಲ್ಕೇ ವರ್ಷಕ್ಕೆ ನನಗೆ ಹೀಗಾಯಿತು ಹೌದು ಆದರೆ ಅದು ನಾವು ನಾವು ಪಡೆದುಕೊಂಡು ಬಂದದ್ದಲ್ಲವೆ? ಅನುಭವಿಸಬೇಕು"–ಎನ್ನುತ್ತಾಳೆ. ಏನೇ ಆದರೂ ಕೂಡ ಎಲ್ಲದಕ್ಕೂ ತಮ್ಮ ಗ್ರಹಚಾರವೇ ಕಾರಣವೆನ್ನುತ್ತಾರೆ. ಗಂಡ ಸತ್ತನೆಂದರೆ ಆಕೆ ತಲೆ ಬೋಳಿಸಿ ಕೊಳ್ಳಬೇಕು, ಮಜ್ಜಿಗೆ ತುಪ್ಪವನ್ನು ಬಿಡಬೇಕು, ತನ್ನ ಎಲ್ಲಾ ಸ್ತ್ರೀ ಸಹಜ ಆಸೆ ಆಕಾಂಕ್ಷೆಗಳನೆಲ್ಲ ಬಲಿಕೊಟ್ಟು ಸಾಯುವವರೆಗೂ ಆಕೆ ಧರ್ಮವನ್ನು ಅನುಸರಿಸಬೇಕಾಗಿದ್ದಿತು.

ವಾಗತ್ತೆಯು ಸುಬ್ಬತ್ತೆಯ ಮದುವೆಯ ವರ್ಣನೆ ಮಾಡುತ್ತಿದ್ದರು. 'ದಿಬ್ಬಣವೆಂದರೆ ಎಷ್ಟುದ್ದ! ದಿಬ್ಬಣ ಬರುವವರೆಗೂ ಈ ಸುಬ್ಬಿಗೆ ನಿದ್ದೆ. ಗರ್ನಾಲು ಶಬ್ಧ ಕೇಳಿದ್ದೇ ಹೆಣ್ಣು ಓಡಿ ಹೊರಗೆ ಬಂತು. ಆನೆಯ ಮೇಲೆ ಕುಳಿತ ಮದುಮಗನ್ನ ನೋಡುತ್ತ ಗೋಡೆಗೊಂದು ಕಾಲು ಕೊಟ್ಟುಕೊಂಡು ನಿಂತೇ ಬಿಟ್ಟಿತು. ನಮ್ಮ ಶಾಮಣ್ಣಜ್ಜಯ್ಯ, ಸತ್ತು ಈಗೆಲ್ಲಿದ್ದಾನೋ, ಇದನ್ನು ಕಂಡು ಎರಡು ಜೋರುಮಾಡಿ ಕವಳು ತಿಪ್ಪಿ ಒಳಗೆ ಓಡಿಸಿದ್ದಲ್ಲವೆ?' ಸುಬ್ಬಿಯಾದಿಯಾಗಿ ಎಲ್ಲರೂ ನಕ್ಕರು. 'ಸುಬ್ಬತ್ತೆ ಮಾವಯ್ಯನನ್ನು ಕಾಣುವುದಕ್ಕೆ ಅಷ್ಟು ಆಸೆಯಾಗಿತ್ತೆ ನಿಮಗೆ?' – ಎಂದರು ಯಾರೋ, ಮದುಮಗ ಎಂದರೆ ಯಾರೆಂದೇ ತಿಳಿಯದವಳಾಗಿದ್ದೆ ತಾನು

ಎಂದು ಸುಬ್ಬಕ್ಕ ಹೇಳಿದರು. ತಿಳಿದಿದ್ದರೆ ಖಂಡಿತ ಹಾಗೆ ಹೋಗುತ್ತಿರಲಿಲ್ಲ ಎಂಬ ನಾಚಿಕೆ ನೆರಳಿತ್ತು, 'ಆಹಾ! ನನ್ನ ಗಂಡನಾಗುವವನು ಆನೆಯ ಮೇಲೆ ಬರುವಂತಾದರೆ. ನಾ ಹೊರಗೆ ಬಂದು ನೋಡುತ್ತಾ... ನಿಲ್ಲುತ್ತಿದ್ದೆ. ಬಿಡು ಬೀಸಾಗಿ ಕನಸುಗಣ್ಣಲ್ಲಿ ನುಡಿದಳು, ಸುಬ್ಬಕ್ಕನ ಕಿರಿಯ ಮಗಳು ಯಾರನ್ನೋ ಪ್ರೀತಿಸುತ್ತಾ ಇನ್ನೂ ಹೇಳದೆ ಬಚ್ಚಿಟ್ಟುಕೊಂಡ ಲತಾ "ಲತ ಹೆಣ್ಣೀನು ಮಾನ ಮರ್ಯಾದೆಯನ್ನೆಲ್ಲ ಸುಟ್ಟು ತಿಂದಿದೆಯ? ಮದುವೆಗೆ ನೆರೆದ ಹೆಣ್ಣು ಮಕ್ಕಳು ಹೇಗಿರಬೇಕು!" ಎಂಬ ಮಾತು ರಪ್ಪಂತ ಎಲ್ಲಿಂದಲೋ ಬಂತು.

ಇಲ್ಲಿ ಲತ ತನ್ನ ಮನಸ್ಸಿನ ಭಾವನೆಯನ್ನು ಹೇಳಿಕೊಂಡದ್ದನ್ನು ಕೂಡ ಸಂಪ್ರದಾಯಸ್ಥ ಮನಸ್ಸು ವಿರೋಧಿಸುತ್ತದೆ. ಹೀಗೆ ಹೆಣ್ಣೊಂದು ತನ್ನ ಭಾವನೆಯನ್ನು ಹೊರಗೆಡಹದೆ ತನ್ನಲ್ಲಿಯೇ ಅದುಮಿಟ್ಟುಕೊಳ್ಳಬೇಕಾದ ಪರಿಸ್ಥಿತಿ ಇದ್ದಿತು.

ವಾಗತ್ತೆ 'ತಮ್ಮಣ್ಣಯ್ಯ ಬಂದಿಲ್ಲವೆ ಮದುವೆ ಮನೆಗೆ?' ಎಂದು ಸುಬ್ಬಕ್ಕನಿಗೆ ಕೇಳುತ್ತಾಳೆ. ಆಗ ಸುಬ್ಬಕ್ಕ 'ಏನೋ, ಈ ಗಂಡಸರ ವಿಚಾರ ಹೇಗೆಂತ ಹೇಳುವುದು? ಅವರದು ನಿಮಗೆ ಗೊತ್ತಲ್ಲ? ಹೆಂಗಸರ ಹತ್ತಿರ ಹೇಳಿ ಒಂದೇ ಒಂದು ಕೆಲಸ ಮಾಡಿದ್ದೆಂತ ಉಂಟಾ ಇವತ್ತಿಗೆ?' ಸುಬ್ಬಕ್ಕನ ಸ್ವರದಲ್ಲಿ ನೋವಿದೆಯೆನ್ನುವಂತಿಲ್ಲ. ಅದು ಬೀಗಿದಂತೆ ಕಂಡದ್ದು ಅದರೊಳಗೆ ಪೊಗರು ಹೊಕ್ಕಿಕೊಂಡದ್ದರಿಂದಲೂ ಇರಬಹುದು. ಆ ಪೊಗರನ್ನು ಕಿತ್ತು ಬಿಸಾಡಿದರೆ ಒಳಗೇನಿರಬಹುದು? ಎಂದು ಆಲೋಚಿಸುತ್ತಿದ್ದಳು. ಸುಬ್ಬಕ್ಕನ ಮೈದಿನಿಯ ಮಗಳು. ಅಷ್ಟರವರೆಗೆ ಒಂದು ಬದಿಯಲ್ಲಿ ಕುಳಿತು ಅತ್ತಿತ್ತ ನೋಡುತ್ತ ಕೇಳುತ್ತ ಅವಶ್ಯವೆನಿಸಿದಾಗ ತನ್ನದೂ ಒಂದು ಪ್ರಶ್ನೆಯನ್ನು ಮುಂದೂಡ್ಡುತ್ತ ಕೈಯಲ್ಲಿದ್ದ ಪುಸ್ತಕದಲ್ಲಿ ಟಿಪ್ಪಣಿ ಮಾಡಿ ಕೊಳ್ಳುತ್ತಿದ್ದ ಈ ಹುಡುಗಿ ಸಮಾಜಶಾಸ್ತ್ರ ಓದಿಕೊಂಡವಳು. ತಡೆಯದೆ 'ಅರರೆ! ಮದುವೆ ಮನೆಗೆ ಬರುತ್ತೇನೆ ಅಥವಾ ಇಲ್ಲ ಎನ್ನಲೂ ಆಗುವುದಿಲ್ಲವಂತಾ ಮಾವಯ್ಯನಿಗೆ? ಇದು ಯಾವ ದೊಡ್ಡ ಕೆಲಸ? ಅದನ್ನು ಹೆಂಗಸರ ಹತ್ತಿರ ಹೇಳಿದರೆ ಏನಾಗುತ್ತದೆಯಂತೆ?' ಎಂದೇ ಬಿಟ್ಟಳು. ಒಡಕು ಬಾಯಿ ಎಂದೇ ಪ್ರಸಿದ್ಧಳು. ಆಗ ಅವಳ ತಾಯಿ 'ನಿಂಗ್ಯಾಕೆ ಅಧಿಕ?' ಎಂಬಂತೆ ಅವಳತ್ತ ದೊಡ್ಡದಾಗಿ ಕಣ್ಣುಬಿಟ್ಟಳು. ತಲೆ ತುಂಬ ಮಾತಾಡುತ್ತಾಳೆ ಎಂಬ ಬಿರುದಿನ ಈ ಹುಡುಗಿಯ ಸುದ್ದಿ ವಾಗತ್ತೆಯ ಕಿವಿಯ ಮೇಲೆ ಅನೇಕ ಸಲ ಬಿದ್ದಿತ್ತು. ತಮ್ಮಣ್ಣಯ್ಯನಿಗೂ ಇವಳ ಮನೆಯವರಿಗೂ ಅಷ್ಟಕಷ್ಟೆ ಎಂಬುದೂ ತಿಳಿದಿತ್ತು. 'ಹೆಣೇ ಏನಂತ ತಿಳಿದಿದ್ದೀ? ಮುಂಚಿನ ಕಾಲದ ಗಂಡಸರೇ ಹೀಗೆ. ಹೆಂಗಸರನ್ನು ಎಲ್ಲಿ ಇಡಬೇಕೂ ಅಲ್ಲೇ ಇಟ್ಟದ್ದಕ್ಕೆ ಬಚಾವಾದರು. ಆಸ್ತಿ, ಮನೆ, ಚಿನ್ನ ಬಣ್ಣ ಮಾಡಿದರು. ಈಗಿನವರಂತೆ ಹೆಂಡತಿ ಕೂತದ್ದೇ ಚೆಂದ, ನಿಂತದ್ದೇ ಚೆಂದ ಎಂದಿದ್ದರೆ ಗಂಡಸಾದವ ಕವುಂಚಿಯೆ ಹೋಗುವುದಲ್ಲವೆ? ನಮ್ಮ ತಮ್ಮಣ್ಣಯ್ಯನಂತಹ ಗಂಡಸು ಇಷ್ಟು ರಾಷ್ಟ್ರದೊಳಗೆ

ಸಿಗಲಿಕ್ಕಿಲ್ಲ' ಎಂದು ಸ್ವಲ್ಪ ಬಿಗಿಯಾಗಿಯೇ ಮಾತಾಡಿಬಿಟ್ಟರು ವಾಗತ್ತೆ ಹೀಗೆ ಹೆಂಗಸರು ತಮಗೆ ತಾವೇ ಕಟ್ಟುಪಾಡುಗಳನ್ನು ನಿರ್ಮಿಸಿಕೊಂಡು ಈ ನಿರ್ಬಂಧದ ನಡುವೆ ಜೀವನವನ್ನು ಸಾಗಿಸುತ್ತಿದ್ದಾರೆ.

'ಒಂದು ಬಾಗಿಲ ಸದ್ದು' ಎಂಬ ಕಥೆಯಲ್ಲಿ ಸಾಲಿಗ್ರಾಮ ಶಿಲೆಯನ್ನು ಕುರಿತದ್ದಾಗಿದೆ. ಸಾಲಿಗ್ರಾಮ ಶಿಲೆ ದೇವರ ಗೂಡಿನಲ್ಲಿರುತ್ತದೆ. ಒಂದು ಸಣ್ಣ ಪೆಟ್ಟಿಗೆಯಲ್ಲಿಟ್ಟಿರುತ್ತಾರೆ. ದಿನಾ ಅದಕ್ಕೆ ಅಭಿಷೇಕವಾಗಬೇಕು, ನೈವಿದ್ಯವಾಗಬೇಕು ವಿಶೇಷ ಮಡಿಮಂತ್ರದಲ್ಲಿ. ಈ ಪೂಜೆ ಮುಡಿ ಅನ್ಯಸಂತರ್ಪಣೆಗೆ ಸಮಾನ. ಅದರ ಅಭಿಷೇಕ ಪವಿತ್ರ ತೀರ್ಥವೆಂದು ಭಾವಿಸುತ್ತಾರೆ. ಆದರೆ ಇದನ್ನ ಸ್ತ್ರೀ, ಶೂದ್ರ, ಪತಿತ, ಷಂಡ ಮುಟ್ಟಲು ಅನರ್ಹರು.

ಸಾಲಿಗ್ರಾಮವನ್ನು ಕುರಿತಂತೆ 'ಸ್ತ್ರೀಣಾಂ ನೈವಾಧಿಕಾರೋ ವಿಜ್ಞೇಯಃ ಶಾಲಗ್ರಾಮ ಶಿಲಾರ್ಚನೇ...' ಎಂಬ ಮಾತಿದ್ದಿತು. ಇದು ಸಾಲದೆಂಬಂತೆ ಮುಟ್ಟಿನವರು, ಮದುವೆಯಾದವರು 'ಶಾಲಗ್ರಾಮ'ವನ್ನು ಮುಟ್ಟಬಾರದು ಎಂಬ ನಂಬಿಕೆ ಇದ್ದಿತು.

ಈ ಕಥೆಯಲ್ಲಿ ಸಾಲಿಗ್ರಾಮ ಶಿಲೆಯ ಮೇಲಿನ ಕುತೂಹಲವೆ ಕಾರಣವಾಗಿ ಹೆಣ್ಣೊಬ್ಬಳು ಆ ಶಿಲೆಯನ್ನು ಪೆಟ್ಟಿಗೆಯಿಂದ ತೆಗೆದುಕೊಂಡಳು. ಪುನಃ ಅದನ್ನು ಅಲ್ಲಿಯೆ ಇಡಲು ಹೋದಾಗ ಖಂಡಿತ ಏನೋ ಸಂಭವಿಸುತ್ತದೆ ಎಂದೆನಿಸುತ್ತದೆ. ನಿಂತ ನೆಲ ಫಟಾರನೆ ಬಿರಿಯುತ್ತದೆ, ತಲೆಮೇಲಿನ ಸೂರು ಕುಸಿಯುತ್ತದೆ, ಪ್ರಪಂಚ ಪ್ರಳಯವಾಗುತ್ತದೆ ಎಂದೆನಿಸುತ್ತದೆ. ಹೆದರಿ ಮೈ ಬೆವರುತ್ತೆ ಬಿಟ್ಟರೆ ಮತ್ತೇನಾಗುವುದಿಲ್ಲ. ಆಕೆಯ ಮನಸ್ಸು ಉಲ್ಲಾಸಿತಗೊಂಡು ಹಗುರಾಗುತ್ತದೆ. ಹೀಗೆ ಹಿಂದೆ ಯಾರೋ ಯಾವುದೋ ಕಾರಣಕ್ಕೆ ಮಾಡಿಟ್ಟ ಕಟ್ಟುಪಾಡುಗಳು ಸ್ತ್ರೀಯರ ಸ್ವಾತಂತ್ರ್ಯಕ್ಕೆ ಧಕ್ಕೆಯನ್ನುಂಟುಮಾಡಿವೆ.

'ಆಭಾ' ಕಥೆಯಲ್ಲಿ ಸ್ತ್ರೀಯರ ಸ್ವಾತಂತ್ರ್ಯವನ್ನೇ ಪ್ರಶ್ನಿಸುವ ಹಾಗಿದೆ. ಸಮಿತಾ ಒಬ್ಬಳೇ ಮನೆಯಲ್ಲಿ ಇದ್ದ ಸಮಯದಲ್ಲಿ ಆಭಾ ಬರುತ್ತಾಳೆ. ಇದ್ದಕ್ಕಿದ್ದ ಹಾಗೆ ಬಂದ ಆಭಾ, ಸಮಿತಾ ಕೇಳದೆ ಇದ್ದರೂ ಕೂಡ ತನ್ನೆಲ್ಲಾ ವಿವರಣೆಗಳನ್ನು ನೀಡುತ್ತಾಳೆ. ಅಂದು ಅಲ್ಲಿಯೇ ಉಳಿಯುತ್ತಾಳೆ. ಬೆಳಗಿನ ಸಮಯ ಸೂರ್ಯ ಬೆಳಗಿನ ಚಿತ್ರದ ಮುಸುಕನ್ನು ನಿಧಾನವಾಗಿ ತೆರೆಯುತ್ತ ಇದ್ದ. ಆಭಾಳನ್ನು ಕರೆದು ತೋರಿಸುವ ಎಂದು ಸಮಿತಾ ಅತ್ತ ನೋಡಿದರೆ ಹೊದಿಕೆಯಲ್ಲ ಅಸ್ತವ್ಯಸ್ಥ ಮಾಡಿಕೊಂಡು ಕವುಚಿ ಮಲಗಿದ್ದಳು ಆಭಾ. ಉರುಲಾಡಿದ ಕುರುಹಂತೆ ಕೂದಲೆಲ್ಲ ಸಿಕ್ಕಾಗಿ ಕೆದರಿತ್ತು. ಥೂ ಇವಳಿಗೊಂದು ಮಲಗಲೂ ಯಾರೂ ಹೇಳಿಕೊಡಲಿಲ್ಲವೆ?... 'ಮಲಗಲೂ ಹೇಳಿಕೊಡುವುದು' ತನ್ನೊಳಗೆ ನಗುತ್ತ ಸಮಿತ ಅವಳ ಹೊದಿಕೆ ಸರಿಪಡಿಸಿ ಕೂದಲು ಸರಿಸಿ 'ಹೆ ಸರಿ ಮಲಕೊ, ಒಳ್ಳೆಗಂಡಸರಂತೆ ಮಲಗಿದ್ದೀಯಲ್ಲ'.

ಕಣ್ಣು ತೆರೆಯದೇ ಎಂದಳು ಆಭಾ 'ಹಾಗಾದರೆ ಗಂಡಸುತನ ಎಲ್ಲೆಲ್ಲ ಇರುತ್ತದಪ್ಪ!... ಮಲಗುವುದರಲ್ಲಿಯೂ ಇದೆ ಎಂದರೆ!... ಅಥವಾ ಇರುವುದು ಅಲ್ಲಿ ಮಾತ್ರವ?... ಬಿಡು. ನಾನೊಂದು ರೀತಿ ಗಂಡಸೇ' ಎಂದು ಆಭಾ ಹೇಳುತ್ತಾಳೆ.

ಹೀಗೆ ಹೆಣ್ಣೊಬ್ಬಳಿಗೆ ಮಲಗಲು, ನಡೆಯಲು, ಕೂರಲು ಎಲ್ಲದಕ್ಕೂ ನಿರ್ಬಂಧವಿದೆ ಎಂಬುದನ್ನು ವೈದೇಹಿಯವರು ಈ ಕಥೆಯ ಮೂಲಕ ತಿಳಿಸುತ್ತಾರೆ.

## ಸಾಮಾಜಿಕ ಏಣಿಶ್ರೇಣಿಯಲ್ಲಿ ಜಾತಿ ಪದ್ಧತಿ

ವೈದೇಹಿಯವರು ತಮ್ಮ ಕಥೆಗಳಲ್ಲಿ ಜಾತಿ ಪದ್ಧತಿಯನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಉನ್ನತವಾದ ಸ್ಥಾನದಲ್ಲಿ ಬ್ರಾಹ್ಮಣರು ಹಾಗೂ ತೀರ ಕೆಳಮಟ್ಟದ ಸ್ಥಾನದಲ್ಲಿ ದಲಿತರು, ಕೊರಗರು ಕಂಡುಬರುತ್ತಾರೆ. ಇವರು ಬರೆದ ಕಥೆಗಳಲ್ಲಿ ಬ್ರಾಹ್ಮಣರು–ಕೊರಗರು, ಬ್ರಾಹ್ಮಣರು–ಕ್ರಿಶ್ಚಿಯನ್ನರ ಸಂಬಂಧಗಳಲ್ಲಿ ವ್ಯಕ್ತವಾಗುವ ಮೇಲು–ಕೀಳಿನ, ಮಡಿ–ಮೈಲಿಗೆಯ ವಿಚಾರವನ್ನು ತಿಳಿಸುತ್ತಾರೆ.

'ಅಲ್ಲಲ್ಲಿನ ಲೋಕದವರು' ಕಥೆಯಲ್ಲಿ ಕೆಳಜಾತಿಯ ಹೆಣ್ಣೊಬ್ಬಳು ಮೇಲ್ಜಾತಿಯವಳಾಗ ಬಯಸುವ ವಿಚಾರವನ್ನು ತಿಳಿಸುತ್ತಾರೆ.

ಶೂದ್ರ ಜಾತಿಯ 'ಮಂಜಿ' ಬ್ರಾಹ್ಮಣ ಜಾತಿಯ ಲಕ್ಷ್ಮಿದೇವಮ್ಮನ ಮನೆಗೆ ಕೆಲಸಕ್ಕೆ ಹೋಗುತ್ತಿರುತ್ತಾಳೆ. ಮಂಜಿ ಲಕ್ಷ್ಮಿದೇವಮ್ಮನಿಗೆ ತೀರಾ ಆತ್ಮೀಯಾಳಾಗಿದ್ದರು. ಅವರ ಮನೆಯ ಕೆಲಸವನ್ನು ತನ್ನ ಮನೆಯ ಕೆಲಸವೇನೋ ಎಂಬಂತೆ ಜವಬ್ದಾರಿಯಿಂದ ಮಾಡುತ್ತಿದ್ದಳು.

ಮಂಜಿಯ ಎಲ್ಲಾ ಕೆಲಸಗಳೂ ಅವರಿಗೆ ಹಿತವಾಯಿತು ಎನ್ನಲಾಗದು. ಆದರೆ ಅವಳ ಸಂಗ ಹಿಡಿಸಿತು. ಹೆಜ್ಜೆಗೊಮ್ಮೆ 'ಗಂಡಸ್ರನ್ ನನ್ನೆದ್ರ್ ನಿವಾಳ್ಸಿ' ಎನ್ನುವ ಮಂಜಿ ಕಲ್ಲುಕಟ್ಟಲಿಕ್ಕೂ ಸೈ. ತಾಪೆ ಹಿಡಿದು ಸಿಮೆಂಟು ಗಾರೆಗೂ ಸೈ.

ಈಗೀಗ ಮನೆಕೆಲಸ ಮಾಡಲಿಕ್ಕೆ ಕೈಕಾಲು ಗಂಟೇ ಬರುವುದಿಲ್ಲ... ಒಳಗೇ ಒಂದು ಗಟ್ಟಿ ಜನ ಇದ್ದಿದ್ದರೆ ಗೆಲ್ಲುತ್ತಿದ್ದೆ... ಇತ್ಯಾದಿ ಸುಖದುಃಖಗಳಿಗೆ ಮಂಜಿ ಕೇಳುಗಳಾದಳು. ಕೊಂಚ ಹಾಕಿಕೊಂಡು ಬಂದ ದಿನದಲ್ಲಿ 'ಅಮ್ಮ, ನಂಗೆ ಬಿಡಿ. ನಾ ಮಾಡಿ ಹಾಕ್ತೆ. ಅಡಿಗಿಮನೆಯಿಂದ ನೀವು ಹೊರ್ಗ್ ಹೋಯ್ನಿ, ಹ್ಲಾಂ... ಆದಾಗ!... ಹೆದರಬೇಡಿಯೇ, ನಾನು ಬಿರಾಮಣರ ಹಾಂಗೇ, ಚ್ವೊಕ್ಕೊ' ಎಂಬಳು. ಹೇಳುವುದಕ್ಕಿಂತ ಹೆಚ್ಚು ನಗುವಳು.

ಸೀರೆ ಘಮ್ಮೆಂದು ವಾಸನೆ ಹೊಡೆದರೂ ಅಮ್ಮನ ಬಳಿ ತಮ್ಮ ಮಡಿಯ ವಿಚಾರ ಹೇಳುತ್ತಾ ಕಾರ್ತಿಕ ಮಾಸದ ಪ್ರತೀ ಸೋಮವಾರ ಒಂದಷ್ಟು ಅಕ್ಕಿ ತರಕಾರಿ ತಂದುಕೊಟ್ಟು 'ಅಮ್ಮ'ನ ಕೈಯಿಂದಲೇ ಬೇಸಿಸಿಕೊಂಡು. ಹಿತ್ತಿಲಿಗೆ ಹೋಗಿ ಒಂದು ಮರಸಣಿಗೆ ಎಲೆಯನ್ನು ಕೊಯ್ದು ತಂದು ತೊಳೆದು ಜಗಲಿ ತುದಿಯಲ್ಲಿ ಕುಡಿ ನೇರ ಮೇಲೆ ಮಾಡಿ ಹಾಕಿಕೊಂಡು ಗಿಂಡಿ ನೀರು ಇಟ್ಟುಕೊಂಡು ಕೂರುವಳು 'ಅಮ್ಮ' ನಿಂದಲೇ ಬಡಿಸಿಕೊಂಡು ಉಂಡು ಏಳುವ ಶಾಸ್ತ್ರದವಳು. 'ನೀನ್ ಅಕ್ಕಿ ತಪ್ಪುದ್ ಬೇಡ' ಎಂದು

ಲಕ್ಷ್ಮೀದೇವಮ್ಮ ಹೇಳಿದರೆ, ಮಂಜಿ 'ಉಳಿದಂತೆ ಹಾಂಗೆ ಉಂಬೆನಲೆ! ಸಾಸ್ರ ಮಾಡುವತಿಗೆ ಸಾಸ್ರವೇ' ಎಂದು ಅವರಿಗೆ ಶಾಸ್ತ್ರ ಹೇಳುತ್ತಾಳೆ. ಅವಳು ನಿಜಕ್ಕೂ ಬ್ರಾಹ್ಮಣತಿಯಾಗುವವಳು, ತಪ್ಪಿ ಶೂದ್ರ ಜಾತಿಯಲ್ಲಿ ಹುಟ್ಟಿರಬೇಕು ಎಂದು ಲಕ್ಷ್ಮೀದೇವಮ್ಮ ಹೇಳಿದರೆ ಮಂಜ 'ಬ್ರಾಹ್ಮಣಕೆಯಲ್ಲಿ ಯಾವುದರಲ್ಲಿ ಕಡಿಮೆ ಇದ್ದೇನೆ? ಈ ಶಾಸ್ತ್ರಗಳೆಲ್ಲ ಮುಂದಿನ ಜನ್ಮದಲ್ಲಿ ಆ ಜಾತಿಯಲ್ಲಿ ಹುಟ್ಟಲಿಕ್ಕಾಗಿಯೇ ಮಾಡುತ್ತಿರುವುದಲ್ಲವೆ?' ಎಂದೆನ್ನುತಿದ್ದಳು.

ಮಂಜಿಯ ಮಾತನ್ನು ಕೇಳಿಸಿಕೊಂಡ ಗುಂಡಕ್ಕ ಅವಳನ್ನು ಕರೆದು 'ಮಂಜಿ ಗುಲಗಂಜಿ, ನಿಂಗೆ ಬಾಂಬ್ರ ಜಾತಿ ಯಂತಕ್ಕಾ? ಒಂದು ಮೀನಾ, ಕೋಳಿಯಾ, ಮಾಂಸವಾ? ಬರಿ ಚಪ್ಪೆ ಜಾತಿ. ಹೌದನಾ, ಈಗ ನೀನ್ ಯಂತ಼ಂತ಼ೆಲ್ಲ ಆದೆ! ಬಾಂಬ್ರ ಜಾತಿಯಾಳ್ಗ್ ಹುಟ್ಕಂಡಿದ್ರೆ ನಿನ್ನ ಬದುಕೂಕೆ ಬಿಡ್‌ತಿದ್ವಾ? ಉರಿಸಿದ್ದ ಹ಼ಾಂಗೇ ಸೈಸ್ತಿದ್ದೋ' ಎಂದೆನ್ನುತ್ತಾರೆ.

ಗುಂಡಕ್ಕನ ಪ್ರಕಾರ ಮೇಲ್ಜಾತಿಯಲ್ಲಿ ಹುಟ್ಟಿ ಇಲ್ಲಸಲ್ಲದ ಸಂಪ್ರದಾಯಗಳಿಂದ ತಮ್ಮನ್ನ ನಿರ್ಬಂಧಿಸುವುದಕ್ಕಿಂತ ಕೆಳಜಾತಿಯಲ್ಲಿ ಹುಟ್ಟಿ ಸ್ವತಂತ್ರವಾಗಿ ಬದುಕು ನೆಡೆಸುವುದೇ ಲೇಸೆಂಬ ಭಾವನೆ ವ್ಯಕ್ತಪಡಿಸುತ್ತಾರೆ.

ಬೆಳೆಯುತ್ತಿದ್ದ಼ ಆ ಊರಿಗೆ ಆ ವರ್ಷ ಬ್ಯಾಂಕ್ ಶಾಖೆಯೊಂದು ಬಂತು. ಅದು ಬಂದ ಸುರುವಿಗೆ ಕಟ್ಟಡ ಗುಡಿಸಲು ಜನ ಬೇಕು ಎಂಬುದನ್ನು ಯಾರಿಂದಲೋ ಕೇಳಿಸಿಕೊಂಡ ಮಾಂಕಾಳಿ, ಬ್ಯಾಂಕಿನ ಸಂಬಳವೆಂದ ಮೇಲೆ ಮನೆಗುಡಿಸುವ ಸಂಬಳಕ್ಕಿಂತ ಜಾಸ್ತಿ ಇರುತ್ತದೆಯೆಂದೆಲ್ಲ ವಿಷಯ ತಿಳಿದು, ತನಗೆ ಯಾರಾದರೂ ಆ ಕೆಲಸ ಮಾಡಿ ಕೊಟ್ಟಿದ್ದರೆ ಒಳ್ಳೆಯದಿತ್ತು ಎಂದು ಲಕ್ಷ್ಮೀದೇವಮ್ಮನ ಮುಂದಿಟ್ಟಳು. ಯಾರಾದರೂ ಎಂದರೆ ಯಾರು? ಒಂದೋ ಲಕ್ಷ್ಮೀದೇವಮ್ಮನ ಗಂಡ ಅಥವಾ ರಾಮದೇವರು... ಈ ಇಬ್ಬರನ್ನು ಬಿಟ್ಟು ಮೂರನೆಯವರ ಹತ್ತಿರ ಲಕ್ಷ್ಮೀದೇವಮ್ಮ ಹೇಳುವವರೇ?

ತಾನು ಹೇಳಿದ್ದನೆಂದು ಮಾಂಕಾಳಿಗೂ ತಿಳಿಯಬೇಕೆಂಬ ಇರಾದೆಯಿಂದ ಆಕೆಗೆ ಕೇಳಿಸುವ ಹಾಗೆ ಲಕ್ಷ್ಮೀದೇವಮ್ಮ ಮಗನನ್ನು ಕರೆದು 'ಇಗ ಮಣಿ, ಬ್ಯಾಂಕು ಗುಡಿಸುಕೆ ಜನ ಬೇಕಂಬ್ರಲೆ, ಏನಾರೂ ಮಾಡಿ ನಮ್ ಮಾಂಕಾಳಿಗೆ ಆ ಕೆಲ್ಸ ಮಾಡ್ಸಿ ಹಾಕುಕಾತ್ತ ಕಾಣಿಕಾಂಬ ಅಪ್ಪ ಮಗ' ಎಂದರೆ ಆತ 'ಯಂತ? ಬ್ಯಾಂಕ್ ಗುಡಿಸು ಕೆಲ್ಸವ? ಮತ್ತೆಂದ ಅಲ್ದ? ಮರ್ಯಾದಸ್ತರ ಮನೆ ಹೆಂಗ್‌ಸ್ರ್ ಮಾಡು ಕೆಲ್ಸ ಅಲ್ಲ ಅಪ್. ಅದ್ಕೆಲ್ಲ ಶೂದ್ರೇ ಸಮ. ನಿಂಗೊತ್ತಿಲ್ಲ' ಎಂದನು.

ಶೂದ್ರ ಜಾತಿಯವರೆಂದರೆ ಕೀಳುಮಟ್ಟದ ಕೆಲಸವನ್ನೇ ಮಾಡಿಕೊಂಡಿರಬೇಕೆಂಬ ವಿಚಾರ ಇಲ್ಲಿಬರುತ್ತದೆ. ಇಲ್ಲಿ ವೃತ್ತಿಯೂ ಕೂಡ ಜಾತಿಯಾಧಾರಿತವಾಗಿ ಮಾರ್ಪಟ್ಟಿದ್ದನ್ನು ಕಾಣಬಹುದು.

'ಗುಲಾಬಿ ಟಾಕೀಸು ಮತ್ತು ಅಲೆಗಳು' ಎಂಬ ಕಥೆಯಲ್ಲಿ ಬಡವರ ಆರ್ಥಿಕ ಸ್ಥಿತಿಯೇ ಕಾರಣವಾಗಿ ಅವರನ್ನು ಶೋಷಿಸುವ ಪ್ರಸಂಗವಿದೆ. ಟಾಕೀಸಿನ ಮ್ಯಾನೇಜರ್ ನೋಡುವುದಕ್ಕೆ ಸಂಭಾವಿತನಂತೆ ಕಂಡರೂ ಕಸ ಗುಡಿಸುವ ಕೆಳಜಾತಿಯ ಹುಡುಗಿಯೊಂದಿಗೆ ಮಲಗಿದ. ಪಾಯಿಖಾನೆ ತೊಳೆಯುವ ಕೊರಾತಿಯೊಂದಿಗೂ ಅನೈತಿಕ ಸಂಬಂಧ ಹೊಂದುತ್ತಾನೆ. ಹೀಗೆ ಕೆಳಜಾತಿಯವರನ್ನು ಲೈಂಗಿಕವಾಗಿ, ಆರ್ಥಿಕವಾಗಿ ಶೋಷಿಸುವ ಪ್ರಸಂಗವಿದೆ.

ಈ ಕಥೆಯಲ್ಲಿ ಮೇಲ್ಜಾತಿ ಹೆಂಗಸರು ಕೆಳಜಾತಿಯ ಹೆಂಗಸರನ್ನು ಕಾಣುವ ಮತ್ತು ನಡೆಯಿಸಿಕೊಳ್ಳುವ ಪರಿಯನ್ನು ಲೇಖಕಿ ತಮ್ಮ ಬರಹದಲ್ಲಿ ತಿಳಿಸುತ್ತಾರೆ.

ಲಿಲ್ಲಿಬಾಯಿ ಊರಿನಲ್ಲಿ ಸೂಲಗಿತ್ತಿ ಕೆಲಸಮಾಡುತ್ತಿದ್ದಳು. ಈಕೆ ಕೆಳಜಾತಿಯ ಹೆಂಗಸು. 'ಗುಲಾಬಿ ಟಾಕೀಸು' ಬಂದದ್ದೇ ಬಂದದ್ದು, ಊರು ಮೊದಲು ಅದುರಿದ್ದು ಸೂಲಗಿತ್ತಿ ಲಿಲ್ಲಿಬಾಯಿಯ ಮುಖಾಂತರ ಏನಾದರೂ ಮಾಡಿ ದೊಡ್ಡವಳಾಗಬೇಕು ಎಂದು ಆಕೆ ಯಥಾರ್ಥವಾಗಿ ಆಸೆ ಪಡುತ್ತಿದ್ದರೆ ಆ ಸುಟ್ಟ ಊರಲ್ಲಿ ಏನುಂಟು? ಅಂತೂ ಒಂದು ಟಾಕೀಸು ಬಂತು. ಹೆಚ್ಚು ಸಂತೋಷಪಟ್ಟವಳೆಂದರೆ ಲಿಲ್ಲೀಬಾಯಿಯೇ.

ಲಿಲ್ಲಿಬಾಯಿ ಆವತ್ತು ಆಕೆ ಎಂದಿನಿಂದಲೂ ಹೊಕ್ಕು ಹೊರಡುವ ರಂಗರಾಯರ ಮನೆಗೆ ಬರುವ ಪೋರ್ಸೆ ಬೇರೆಯಿತ್ತು. ಮಗುವಿನ ಉಚ್ಚೆ ಬಟ್ಟೆ ಒಗೆಯಲು ಹಿಂದಿನ ದಿನ ಮನೆಗೆ ಕೊಂಡೊಯ್ದವಳು ಒಣಗಿದ ಬಟ್ಟೆಗಳನ್ನು ಮಡಚಿ ಬುಟ್ಟಿಯಲ್ಲಿ ಇಟ್ಟುಕೊಂಡು ಬೆಳಿಗ್ಗೆ ಬಂದಳು. 'ನಾಳೆಯಿಂದ ನಾನು ಸಾಯಂಕಾಲದ ಮೇಲೆ ಬರುವುದಿಲ್ಲ. ನಾಲ್ಕು ನಾಲ್ಕುವರೆಗೆ ಬಂದು ಬಾಣಂತಿಗೆ ಕೈ ಕಾಲು ತೊಳೆಯಲು ನೀರು ಕೊಡುತ್ತೇನೆ. ಮತ್ತೆ ಬರುವುದು ಬೆಳಿಗ್ಗೆಯೇ ಎಂದು ಹೇಳುತ್ತಾಳೆ. ಆಕೆಗೆ ಟಾಕೀಸಿನಲ್ಲಿ ಹೆಂಗಸರ ಕಡೆಯ ಗೇಟ್‌ಕೀಪರ್ ಕೆಲಸಕ್ಕಿರುತ್ತದೆ. ಹಾಗಾಗಿ ಬಾಣಂತನದ ಕೆಲಸವನ್ನು ಆಕೆ ಜುಜುಬಿಯಾಗಿ ನೋಡಲಾರಂಬಿಸುತ್ತಾಳೆ. ಈಕೆ ಹೀಗೆ ಮಾಡಿದ್ದನ್ನು ಮೇಲ್ವರ್ಗದ ಸ್ತ್ರೀಯರು ಸಹಿಸಿಕೊಳ್ಳುವುದಿಲ್ಲ.

ಲಿಲ್ಲೀಬಾಯಿ ಟಾಕೀಸಿನಲ್ಲಿ ಗೇಟ್‌ಕೀಪರ್ ಕೆಲಸ ಸಿಕ್ಕಿದ ಮೇಲೆ ಊರಿನ ಯಾರಮನೆಗೆ ಹೋದರು ಆಕೆಗೆ ಕಾಫಿ ಖಾಯಂ ಆಯಿತು. ಮೇಲ್ವರ್ಗದ ಸ್ತ್ರೀಯರು ಟಾಕೀಸಿಗೆ ಬಂದು ಹೆಚ್ಚು ಜನವಿದ್ದರು ಕಡಿಮೆ ಟಿಕೇಟ್ ತೆಗೆದುಕೊಂಡು ಸಿನಿಮಾ ನೋಡುತ್ತಿದ್ದರು. ಟಾಕೀಸಿನ ಮ್ಯಾನೇಜರ್ ಕೊರತಿಯೊಂದಿಗೆ ಇದ್ದ

ವಿಷಯವನ್ನು ಲಿಲ್ಲಿಬಾಯಿ ಊರಿನಲ್ಲೆಲ್ಲಾ ಹೇಳಿದಳು. ಇದರಿಂದ ಸಿಟ್ಟಿಗೆದ್ದ ಆತ ಲಿಲ್ಲಿಬಾಯಿಯ ಮೇಲೆ ಶಿಸ್ತುಕ್ರಮ ಕೈಗೊಳ್ಳುತ್ತಾನೆ.

ಸಂಜೆ ಮಂಜುನಾಥಯ್ಯ ಎಂಬ ದೊಡ್ಡವರ ಮನೆಯಿಂದ ಹೆಂಗಸರು ಮಕ್ಕಳ ಒಂದು ದಂಡೇ ಬಂತು. ಹೀಗೆ ಬರುವವರು ನೇರ ಕೌಂಟರಿಗೆ ಹೋಗಿ ಟಿಕೇಟ್ ತರುವುದಿಲ್ಲ. ಬದಲು ಲಿಲ್ಲಿಯ ಬಳಿಗೇ ಹೋಗಿ ಎಷ್ಟು ತರುವುದೆಂದು ಕೇಳಿ ಅಷ್ಟನ್ನು ತರಿಸುವುದು ಆಕೆಯೇ ಮಾಡಿಸಿದ ರೂಢಿಯಷ್ಟೆ!

ಇವತ್ತು!

ಲಿಲ್ಲೀಬಾಯಿಯ ಕಣ್ಗೆ ಮೇಲಾದ ಹಾಗಿತ್ತು. ಯಾರೋ ಇವರು ತನಗೆ ಗೊತ್ತೇಇಲ್ಲವೆಂಬಂತೆ ಗೋಡೆ ನೋಡುತ್ತ 'ಎಷ್ಟು ಎಂದು ನನ್ನ ಹತ್ತಿರ ಏನು ಕೇಳುವುದು? ಹೋಗಿ ಕೌಂಟರಿನಿಂದ ಟಿಕೇಟು ತೆಗೆದುಕೊಂಡು ಬನ್ನಿ. ಅಲ್ಲಿಯವರೆಗೆ ಒಳಗೆ ಬಿಡುವುದಿಲ್ಲ. ಇದೇನು ನನ್ನ ಅಜ್ಜನ ಟಾಕೀಸಾ' ಎಂದೇ ಬಿಟ್ಟಳು.

ಹಿಂದಿನ ದಿನವಷ್ಟೇ ತಮ್ಮಲ್ಲಿಗೆ ಬಂದು, ಮ್ಯಾನೇಜರನ್ನು ಕುರಿತು ಬಾಯಿ ಒಣಗುವವರೆಗೆ ಹೇಳಿ. ಒಂದು ಕಾಸಂಡಿ ಮಜ್ಜಿಗೆ ನೀರು ಏರಿಸಿ, ಒಂದು ಕುಕ್ಕೆ ತುಂಬ ಉಪ್ಪಿಗೆ ಹಾಕಿದ ಹಲಸಿನ ಸೂಳೆ, ಮಾವಿನ ಕಾಯಿ ಮತ್ತು ಗೋವೆ ಹಣ್ಣುಗಳನ್ನು ತುಂಬಿಕೊಂಡು ಹೋದವಳು ಇದೇ ಸತ್ತವಳೇ! ಮಂಜುನಾಥಯ್ಯನ ಹೆಂಡತಿ ದಿಗ್ಭ್ರಾಂತಳಾದಳು. ತನ್ನನ್ನು ಏನೆಂದು ತಿಳಿದಳು ಈ ಲಿಲ್ಲೀಬಾಯಿ? ಎಂಟು ನೂರು ಮುಡಿ ಅಕ್ಕಿ ಹುಟ್ಟುವಳಿಯವರು, ಇವತ್ತಿಗೆ ಅವಳನ್ನೇ ಕೊಂಡುಕೊಳ್ಳುವಷ್ಟು ಶಕ್ತಿಯುಳ್ಳವರು, ಮಂಜುನಾಥಯ್ಯನ ಹೆಂಡತಿ ಅವಡು ಗಚ್ಚಿದರು. ಆದರೆ ತುಸು ಈಚೆ ಬಂದು ಸೀರೆಯಂಬಡೆಯೊಳಗಿಂದ ದುಡ್ಡು ತೆಗೆದರೆ ಅಲ್ಲಿ ಇದ್ದುದೆಷ್ಟು?

ಮಂಜುನಾಥಯ್ಯನ ಹೆಂಡತಿ ಸಂಕಟಗೊಂಡರು ಎಷ್ಟು ನೂರು ಅಕ್ಕಿ ಹುಟ್ಟುವಳಿ ಇದ್ದರೇನಾಯಿತು? ಮನೆಯಲ್ಲಿ ತಾವು ಬಗ್ಗಿದ ಬೆನ್ನು ಎತ್ತದೆ ಗೇಯ್ದರೇನಾಯಿತು? ಇರುವಷ್ಟನ್ನಾದರು ತಾನು ಬೇಡು ಪರದೇಶಿಯಂತೆ ಕೇಳಿ ತೆಗೆದುಕೊಳ್ಳಬೇಕಾಯಿತಲ್ಲವೆ? ಎಂದೆನಿಸಿತು. ಇರುವ ಹಣಕ್ಕೆ ನಾಲ್ಕು ಟಿಕೇಟ್ ತರಿಸಿ ಮಕ್ಕಳನ್ನು ಮನೆಗೆ ಕಳಿಸಿದಳು. ಅಂದು ಅವರಿಗೆ ಸಿನಿಮಾ ನೋಡಿದ ಹಾಗೆ ಆಗಲಿಲ್ಲ. 'ಒಟ್ಟಾರೆ ಅತಂತ್ರರಾದೆವಲ್ಲ; ಕೈ ತುಂಬ ದುಡ್ಡನ್ನು ಗಂಡಸರು ಕೊಟ್ಟಿದ್ದರೆ, ಅವರ ಮರ್ಯಾದೆಯೇ ಉಳಿಯುತ್ತಿತ್ತು' ಎಂದಾಗ ವಾರಗಿತ್ತಿಯರಲ್ಲೊಬ್ಬರು 'ಸುಮ್ಮನಿರಿ ಅಕ್ಕ, ಊರವರು ಏನು ಹೇಳುತ್ತಾರೆ? ಮಂಜುನಾಥಯ್ಯನ

ಮನೆಯವರು ಎನ್ನುತ್ತಾರೆ ನಮ್ಮ ಹೆಸರು ಹೇಳುತ್ತರೆಯೇ? ಅಂದ ಮೇಲೆ ನಮ್ಮ ಮರ್ಯಾದೆ ಎಲ್ಲಿ ಹೋಯಿತು?' ಎಂದು ಕೇಳಿದಳು.

ಇಲ್ಲಿ ಮೇಲ್ವರ್ಗದ ಸ್ತ್ರೀಯರು ಕೆಳಜಾತಿಯ ಲಿಲ್ಲಿಬಾಯಿಯನ್ನು ತಮಗೆ ಹೇಗೆ ಬೇಕೋ ಹಾಗೆ ಬಳಸಿಕೊಳ್ಳುತ್ತಿದ್ದರು. ಆದರೆ ಅದು ಸಾಧ್ಯವಾಗದೇ ಇದ್ದಾಗ ಆಕೆಯನ್ನು ಹೀನಾಯವಾಗಿ ಕಾಣುವುದನ್ನು ಕಾಣಬಹುದಾಗಿದೆ.

## ಸಂಪ್ರದಾಯ, ನಂಬಿಕೆ ಮತ್ತು ಮಡಿ–ಮೈಲಿಗೆ ರಿವಾಜು

ಕರಾವಳಿ ಪರಿಸರ ಎಂದಾಕ್ಷಣ ನಮಗೆ ನೆನಪಾಗುವುದು ಅದೊಂದು ಸಾಂಸ್ಕೃತಿಕ ನೆಲೆಬೀಡು, ಧಾರ್ಮಿಕ ಉತ್ಸವಗಳ ನಾಡೆಂದು. ಇಂತಹ ಕರಾವಳಿ ಪ್ರದೇಶದ ಜನರ ಜನಜೀವನದಲ್ಲಿ ಸಂಕೀರ್ಣವಾದ ಆರಾಧನಾ ಪರಂಪರೆಗಳು ಚಾಲ್ತಿಯಲ್ಲಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ನಾಗಾರಾಧನೆ, ಭೂತಾರಾಧನೆ ಹಾಗೂ ಸಿರಿ ಆರಾಧನೆ ಎಂಬುದಾಗಿ ಗುರುತಿಸಿಕೊಳ್ಳಬಹುದು. ತುಳುನೆಲದ ಜನಪದರ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಪ್ರಜ್ಞೆಯ ಪ್ರತೀಕವಾಗಿ ಮೇಲಿನ ಮೂರು ಮುಖ್ಯ ಆರಾಧನಾ ಪರಂಪರೆಗಳಿದ್ದು ಇಂದಿನ ಆಧುನಿಕತೆಯ ಸಂದರ್ಭದಲ್ಲಿಯು ತಮ್ಮ ಅಸ್ಥಿತ್ವವನ್ನು ಕಳೆದುಕೊಂಡಿಲ್ಲ.

ನಾಗಾರಾಧನೆ ಕರಾವಳಿ ಪ್ರದೇಶದಲ್ಲಿ ಬಹಳ ಪ್ರಾಚೀನತಮವಾದುದಾದರೆ. ಭೂತಾರಾಧನೆ ಜನಪದರ ಸಾಮಾಜಿಕ, ನ್ಯಾಯಯುತವಾದ ಅಗತ್ಯಗಳನ್ನು ಇಂದಿಗೂ ಒದಗಿಸಿಕೊಡುತ್ತಿದೆ. ಜನಪದರ ಮನೋದೈಹಿಕ ಬೇನೆಗಳು, ಕೌಟುಂಬಿಕ ಸಮಸ್ಯೆಗಳು ಇವುಗಳಿಂದೆಲ್ಲ ಹೊರಬರುವುದಕ್ಕೆ ಪರಿಹಾರಾರ್ಥಕವಾಗಿ ಹುಟ್ಟಿಕೊಂಡ ಜನಪದರ ಅಪೂರ್ವ ಮನೋವೈದ್ಯಕೀಯ ಸೃಷ್ಟಿ ಸಿರಿ ಆರಾಧನೆ. ಕರಾವಳಿ ಪ್ರದೇಶದಲ್ಲಿನ ಯಾವುದೇ ಆರಾಧನೆ ಆಚರಣೆಗಳಿಗೆ ಕಾರ್ಯಕಾರಣ ಸಂಬಂಧವಿರುವುದನ್ನು ಗುರುತಿಸಬಹುದು ಒಂದೆಡೆ ಆಚರಣೆ, ಇನ್ನೊಂದೆಡೆ ಅವುಗಳ ಕುರಿತಾದ ಮೌಖಿಕ ಪರಂಪರೆಯು ನಮ್ಮಲ್ಲಿ ದೊರಕುತ್ತದೆ. ಸಾಮಾನ್ಯವಾಗಿ ಮೌಖಿಕ ಸಾಹಿತ್ಯದ ಜೊತೆಗೆ ಒಂದು ನಿರ್ಧಿಷ್ಟ ಆಚರಣೆ ಇರುವುದರಿಂದ ಅವುಗಳು ಚಾರಿತ್ರಿಕವಾದ ದಾಖಲೆಗಳಾಗಿಯೂ, ಜನಪದರ ಲೋಕ ದೃಷ್ಟಿಯಾಗಿಯೂ ಕಾಣುತ್ತದೆ. ಕರಾವಳಿ ಪ್ರದೇಶದ ಆರಾಧನಾ ಪರಂಪರೆಗಳು ಅನೂಚಾನವಾಗಿ ಬೆಳೆದುಬರುವಂತೆಯೇ, ಇಲ್ಲಿ ದೊರಕುವ ಜನಪದ ಸಾಹಿತ್ಯದ ಅಂಶಗಳು ಮತ್ತೆ ಮತ್ತೆ ಮುಂದುವರೆದುಕೊಂಡು ಬಂದವು. ಹಾಗಾಗಿ ಸಾವಿರಾರು ವರ್ಷಗಳ ಹಿಂದೆ ಒಂದಲ್ಲ ಒಂದು ಘಟನೆ ನಡೆದು ಅದು ಜನಪದರ ಮೇಲೆ ಅಗಾಧವಾದ ಪ್ರಭಾವವನ್ನು ಪಡೆದು, ಅವುಗಳು ಕಾಲಾನುಕಾಲಕ್ಕೆ ರೂಪಾಂತರವನ್ನು ಹೊಂದಿ. ಒಂದು ನಿರ್ಧಿಷ್ಟ ಆರಾಧನಾ ರೂಪವಾಗಿ ಹಾಗೂ ಸಾಹಿತ್ಯರೂಪವಾಗಿ ಪರಿಣಮಿಸಿರುವುದನ್ನು ನಾವಿಂದು ಗಮನಿಸಬಹುದು.



ವೈದೇಹಿಯವರು ತಮ್ಮ ಕಥೆಯಲ್ಲಿ ಮಂಡಿಸಿರುವ ಹಲವು ವಿಚಾರಗಳು ಅವರಿಗೆ ತಿಳಿಯದೆಯೋ ಅಲ್ಲಿಯ ಸಂಪ್ರದಾಯ, ನಂಬಿಕೆ, ಮಡಿ ಮೈಲಿಗೆ ರಿವಾಜುಗಳನ್ನು ತಿಳಿಸುತ್ತದೆ. ಇವರ ಕಥೆಗಳ ಸಮಗ್ರ ಅಧ್ಯಯನದಿಂದ ಕರಾವಳಿ ಪ್ರದೇಶದ ಸಂಪ್ರದಾಯ, ನಂಬಿಕೆ ಮತ್ತು ಮಡಿ–ಮೈಲಿಗೆ ವಿಚಾರಗಳ ಬಗ್ಗೆ ಅರಿವು ಮೂಡುತ್ತದೆ.

'ಸೂತಕ' ಕಥೆಯಲ್ಲಿ ಮಡಿ-ಮೈಲಿಗೆ ಸಂಪ್ರದಾಯದ ವಿಚಾರ ಬರುತ್ತದೆ. ಕಿಟ್ಟು ಮನೆಗೆ ಬಂದಾಗ ಅಪ್ಪ ಗೋಪಿ ಹಾರ್ಟ್‌ಫೇಲ್ ಆಗಿ ಮರಣಹೊಂದಿದ ವಿಚಾರ ತಿಳಿಸುತ್ತಾರೆ. ಕಿಟ್ಟುವಿನ ತಂದೆ ಶೋಕವ್ಯಕ್ತಪಡಿಸುತ್ತಾರೆ. ಕಿಟ್ಟು ಬಚ್ಚಲಿಗೆ ಹೋದ ತಕ್ಷಣ ಅಮ್ಮ ಒಳಗಿನಿಂದ ಕೂಗಿ 'ತಲೆಗೆರಡು ತಂಬಿಗೆ ಸುರಿದುಕೊಂಡು ಸ್ನಾನಮಾಡಿಯೇ ಬಾ ಮಹಾರಾಯ!' ಎಂದೆನ್ನುತ್ತಾರೆ. ಹಾಗೆಯೆ ತನ್ನ ಮಾತನ್ನು ಮುಂದುವರೆಸಿ 'ಇದೇನು ಸಾಧಾರಣ ಪೆಟ್ಟ? ಕೈಯಲ್ಲಿದ್ದ ತುತ್ತನ್ನು ಕಾಗೆ ಕಚ್ಚಿಕೊಂಡು ಹೋದ್ ಹಾಗಾಯಿತು. ಸುಬ್ಬಕ್ಕೆ ಹೇಗೆ ಹೆತ್ತ ಕರುಳನ್ನು ತಣಿಸಿಕೊಳ್ಳುತ್ತಾಳೋ'-ಎಂದು ಸೆರಗಿನಿಂದ ಗಾಳಿಬೀಸಿಕೊಳ್ಳುತ್ತಾಳೆ.

ತಾಯಿಯ ಮಾತನ್ನು ಕೇಳಿದ ಕಿಟ್ಟು ಕಾಲ ತೀರಿದರೆ ಹಾಗೇ, ಅದಕ್ಕೆ ಅವರು ಇವರು ಅಂತ ಇದೆಯೇ ಎಂದೆನ್ನುತ್ತಾನೆ.

ಕಿಟ್ಟುವಿನ ಮಾತನ್ನು ಕೇಳಿದ ತಾಯಿ 'ಸರಿ, ನೀನು ಬಿಡು. ಯಾರು ಸತ್ತರೂ ಹೀಗೇ ಹೇಳಿ – ಕೈತೊಳೆದುಬಿಡುತ್ತಿ. ಏನು ಮನುಷ್ಯನೋ ಏನೋ. ಹ್ಞಾಂ... ಮರೆಯಬೇಡ. ಅವನು ನಮ್ಮ ಮನೆತನದವನು. ಅವನ ಅಪ್ಪ, ನಿನ್ನ ಅಜ್ಜ ಅಣ್ಣತಮ್ಮಂದಿರು. ಅದನ್ನೂ ನೀನು ಮರೆಯುವವನೇ. ಸೂತಕವಿದೆ ನಮಗೆ, ದೇವಸ್ಥಾನಕ್ಕೆ ಹೋಗಬೇಡ'. ಎಂದು ಹೇಳುತ್ತಾರೆ.

ಇದೇ ಊರಿನಲ್ಲಿ ಬಾಸ್ಕರನೆಂಬುವವನು ಅಕಾಲಿಕ (ಹಾರ್ಟ್‌ಫೇಲ್) ಮರಣಕ್ಕೀಡಾಗುತ್ತಾನೆ. ಇದರಿಂದ ದುಃಖಿತನಾದ ಕಿಟ್ಟು ರಾತ್ರಿ ಮನೆಗೆ ಬಂದಾಗ ಅಮ್ಮ ಊಟ ಮಾಡು ಎಂದಾಗ ಬೇಡವೆನ್ನುತ್ತಾನೆ. ಆಗ ಕಿಟ್ಟುವಿನ ಅಮ್ಮ 'ಅವನು ಹೋದರೆ ನಿನಗೆ ಉಣ್ಣಲೇನು? ಅವನೇನು ನಮ್ಮ ಜಾತಿಯೇ, ಜನವೇ, ಅಂದಿಗನೇ? ಬಾ, ಬಾ. ರಾತ್ರಿ ಅಡಿಕೆಯಷ್ಟು ಉಂಡರೆ ಆನೆಯಷ್ಟು ಬಲವಂತೆ ಮಾವ ಸೊಸೆ ಸ್ವಲ್ಪ ಸ್ವಲ್ಪ ಊಟಮಾಡಿ. ಹಾಗೆ ನೋಡಿದರೆ ದಿನಕ್ಕೊಬ್ಬರು ಸಾಯುತ್ತಲೇ ಇರುತ್ತಾರೆ. ಏನು ಮಾಡಲಾಗುತ್ತದೆ?' ಎಂದರು.

ಕಿಟ್ಟುವಿನ ಅಮ್ಮನ ಮುಖಾಂತರ ಇಲ್ಲಿ ನಂಬಿಕೆ, ಸಂಪ್ರದಾಯ ಮಡಿಮೈಲಿಗೆಯ ವಿಚಾರ ತಿಳಿಯುತ್ತದೆ. ಮನೆತನದವರು ಸತ್ತಾಗ ಆ ಮನೆತನದವರಿಗೆಲ್ಲರಿಗೂ ಸೂತಕ ವಿರುತ್ತದೆ. ಹಾಗಾಗಿ ಆ ಮನೆ ತನಕ್ಕೆ ಸೇರಿದವರು ಯಾವುದೇ ದೇವಸ್ಥಾನಕ್ಕೆ ಹೋಗಬಾರದು. ಯಾವುದೇ ಶುಭಕಾರ್ಯಗಳು ಹಾಗೂ ಧಾರ್ಮಿಕ ಆಚರಣೆಗಳನ್ನು ನಡೆಸಬಾರದೆಂಬ ನಂಬಿಕೆ ಇದೆ. ಕಥೆಯಲ್ಲಿ ಮನೆತನದವನಾದ ಗೋಪಿಸತ್ತಾಗ

ತಮಗೆ ಸೂತಕವಿದೆಯೆಂದು, ಬಾಸ್ಕರ ಸತ್ತಾಗ ತಮಗೆ ಸೂತಕವಿಲ್ಲ ಎಂಬ ವಿಚಾರವನ್ನು ಕಿಟ್ಟುವಿನ ತಾಯಿ ತಿಳಿಸುತ್ತಾರೆ.

'ಚಿಪ್ಪು' ಕಥೆಯಲ್ಲಿ ಸಂಪ್ರದಾಯವೇ ಕಾರಣವಾಗಿ ಹೆಣ್ಣೊಬ್ಬಳು ಅಸಹಾಯಕಳಾಗುವ, ತನ್ನ ಆಸೆ-ಆಕಾಂಕ್ಷೆಗಳನೆಲ್ಲ ಅದುಮಿಡುವ ಪ್ರಸಂಗವಿದೆ. ಹೆಣ್ಣು-ಗಂಡಿಬ್ಬರು ಪರಸ್ಪರ ಒಪ್ಪಿ ಜೀವನಸಂಗಾತಿಗಳಾಗುವ ಬದಲು ವಿವಾಹವೆಂಬ ಸಂಪ್ರದಾಯವೆಂಬುದರ ಮೊದಲ ಮೆಟ್ಟಿಲಾಗಿ ಜಾತಕ ಕಂಡುಬರುತ್ತದೆ. ಜಾತಕ ಕೂಡಿಬಂದ ಮೇಲೆ, ಹಿರಿಯರು ಹೆಣ್ಣನ್ನು ನೋಡಿ ಮದುವೆ ನಿರ್ಧರಿಸುತ್ತಾರೆ. ಯಶೀಯನ್ನು ನೋಡಲು ಭಾನುವಾರ ಗಂಡಿನ ತಂದೆ ಬರುತ್ತಾರೆಂದು ತಂದೆ ಹೇಳಿದಾಗ, ಯಶೀಯ ಅಮ್ಮ ಹುಡುಗ ಏಕೆ ಬರುವುದಿಲ್ಲವೆಂದು ಕೇಳುತ್ತಾಳೆ. ಆಗ ಯಶೀಯ ತಂದೆ 'ಹುಡುಗನಿಗೆ ಅದರಲ್ಲೆಲ್ಲ ನಂಬಿಕೆ ಇಲ್ಲವಂತೆ, ತಂದೆಯದೇ ಉಮೇದು ಎಂತ ಕಾಣುತ್ತದೆ' ಎನ್ನುತ್ತಾರೆ. ಈ ಕಥೆಯಲ್ಲಿ ಒಂದು ಮದುವೆಯ ನಿರ್ಧಾರ ಜಾತಕ ಮತ್ತು ಹಿರಿಯರೆ ನಿರ್ಧರಿಸಬೇಕೆಂಬ ನಂಬಿಕೆಯಿಂದಾಗುವುದನ್ನು ಕಾಣುತ್ತೇವೆ.

'ಭೂತ' ಎಂಬ ಕಥೆಯಲ್ಲಿ ಲೇಖಕಿ ಭೂತದ ವಿಚಾರವನ್ನು ಪ್ರಸ್ತಾಪಿಸುತ್ತಾರೆ. ಮೀರಾ ಬಾಡೂರಿನ ದೊಡ್ಡಮ್ಮನ ಮನೆಗೆ ಹೋಗುತ್ತಾರೆ. ಬಾಡೂರಿನ ಮನೆಯೆಂದರೆ ಏಳು ಚಿನ್ನದ ಕೊಪ್ಪರಿಗೆ ತುಂಬ ಚಿನ್ನದ ನಾಣ್ಯವಿದ್ದ ಮನೆ. ಹಾಗಾದರೆ ನೆಲ ಅಗೆದು ದುಡ್ಡು ತೆಗೆಯಬಹುದು ಎಂದರೆ ಮೀರಾನ ದೊಡ್ಡಮ್ಮ 'ಹಂಗೆಲ್ಲ ಸಿಗತ? ಸರ್ಪನ ಹಾವುಗಳೂ ಅದರ ಸುತ್ತಲೇ ಕಾಯ್ತ್. ಅದರ ಯೋಗ ಇರ್ತವರು ಬಂದ ಕಾಲಕ್ಕೆ ತನ್ನಂತಾನೆ ಎಲ್ಲ ಕೊಪ್ಪರಿಗೆ ಮೇಲೆ ಬರ್ತೊ. ಅಲ್ಲಿಯವರೆಗೆ ಹಿಂಗೇ',-

ಬಾಡೂರಿನ ಅವರ ಮನೆಯಲ್ಲಿ ದೊಡ್ಡದೊಂದು ತೂಗುಮಂಚವಿತ್ತಂತೆ. ಅದು ಭೂತದ ಮಂಚ ಸಂಜೆ ಅದರ ಮೇಲೊಂದು ಹಣತೆ ಹಚ್ಚಿ ಇರುಸುತ್ತಿದ್ದರಂತೆ. ಮಧ್ಯರಾತ್ರಿ ಹೊತ್ತಿಗೆ ಮಂಚ ತಾನಾಗಿಯೇ ತೂಗಿಕೊಳ್ಳುತ್ತ ಇರುವುದನ್ನು ತಾನು ಕಾಣ್ಣಾರೆ ಕಂಡಿದ್ದೇನೆ ಎನ್ನುತ್ತಾರೆ ಮೀರಾನ ದೊಡ್ಡಮ್ಮ ಯಾವನಾದರೂ ಕಳ್ಳ ಬಂದರೆ.

'ಏಯ್ ಕಳ್ಳ ಇಡೆ ಬಲ. ನಿಕ್ ಮಲ್ಪೆ ಬಗೆ'- ಎನ್ನುತ್ತಿತ್ತಂತೆ ಭೂತ. ಕಳ್ಳ ಅಲ್ಲಿಯೇ ಬಿದ್ದು ನೆತ್ತರು ಕಾರುತ್ತಿದ್ದನಂತೆ.

ಭೂತ ಕಥೆಯಲ್ಲಿ ಜನರು ಹೊಂದಿರುವ ಮೂಢನಂಬಿಕೆ ತಿಳಿಯುತ್ತದೆ.

'ಪುಟ್ಟಮ್ಮಂತ್ತೆ ಮತ್ತು ಮೊಮ್ಮಗಳು' ಎಂಬ ಕಥೆಯಲ್ಲಿ ಮಡಿ-ಮೈಲಿಗೆ ವಿಚಾರಗಳು ಕಂಡುಬರುತ್ತದೆ. ಈ ಕಥೆಯಲ್ಲಿ ಬರುವ ಪುಟ್ಟಮ್ಮತ್ತೆ ಎಲ್ಲರಿಗೂ ಅವಶ್ಯಕ. ಬೇಸಿಗೆ ಬಂತೆಂದರೆ

ಪುಟ್ಟಮ್ಮತ್ತೆ ಬೇಡದ ಜನವೇ ಇಲ್ಲ. ಈ ಸಮಯದಲ್ಲಿ ಇವರನ್ನೇನು ಕೇಳಿಕೊಂಡು ಬರುವವರಿಗೇನೂ ಕಡಿಮೆ ಇಲ್ಲ. ಯಾವುದೇ ಸಣ್ಣ ಪುಟ್ಟ ಕೆಲಸವಿದ್ದರೂ ಜನರಿಗೆ ಪುಟ್ಟಮ್ಮತ್ತೆ ಬೇಕು. ಯಾರಾದರು ಮುಟ್ಟಾದರೂ ಅವರ ಮನೆಗೆ ಮೂರು ದಿನ ಅಡಿಗೆ ಮಾಡಿಹಾಕಲು ಈಕೆ ಬೇಕು. ಆನಂದರಾಯರ ಹೆಂಡತಿ ಮುಟ್ಟಾದಾಗ ಮೂರುದಿನ ಅಡುಗೆ ಮಾಡಿಹಾಕಲು ಈಕೆಗೆ ಹೇಳಿಕಳಿಸುವ ವಿಚಾರ ಕಥೆಯಲ್ಲಿದೆ.

ಹೆಣ್ಣಿನಲ್ಲಿ ನೈಸರ್ಗಿಕವಾಗಿ ನಡೆಯುವ ಕ್ರಿಯೆಗೂ ಮಡಿ ಮೈಲಿಗೆ ಎಂಬಂತಹ ಕಟ್ಟುಪಾಡುಗಳನ್ನು ನಿರ್ಮಿಸಿ ಆಕೆಯನ್ನು ನಿರ್ಲಕ್ಷಿಸಲಾಗುತ್ತದೆ. ಎಂಬ ವಿಚಾರ ಲೇಖಕಿಯದ್ದಾಗಿದೆ. ಒಟ್ಟಿನಲ್ಲಿ ಇದು ಕರಾವಳಿ ಪ್ರದೇಶದಲ್ಲಿ ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಸಂಪ್ರದಾಯವನ್ನು ತಿಳಿಸುತ್ತದೆ.

'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಎಂಬ-ಕತೆಯಲ್ಲಿ ಬ್ರಾಹ್ಮಣ ಸಮುದಾಯದ ಸ್ತ್ರೀಯರು ತಮ್ಮ ವೈದವ್ಯವನ್ನು ಕಳೆಯುವ ರೀತಿಯನ್ನ ತಿಳಿಸಿದ್ದಾರೆ. ವಾಗತ್ತೆಯ ಮೊಮ್ಮಗಳ ಮದುವೆಗೆಂದು ಕಾಟಜ್ಜಿ, ಸರಸಜ್ಜಿ, ಹೆಬ್ಬಾಗಿಲಜ್ಜಿಯವರು ಬಂದಿರುತ್ತಾರೆ. ಇವರೆಲ್ಲರು ವಿಧವೆಯರು. ಇವರೆಲ್ಲರು ಹಣೆಗೆ ಬೊಟ್ಟಿಡುವಂತಿಲ್ಲ, ಕರಿಮಣಿ ಸರ ಬಳಸುವಂತಿಲ್ಲ, ತಲೆಯನ್ನು ಬೋಳು ಮಾಡಿಸಿಕೊಂಡು ಕೆಂಪು ಸೀರೆ ಉಟ್ಟು ಸೆರಗನ್ನು ತಲೆಯ ಮೇಲೆ ಹಾಕಿಕೊಳ್ಳಬೇಕು. ಯಾವುದೇ ಶುಭ ಕಾರ್ಯ ನಡೆಯುವ ಮಂಟಪಕ್ಕೆ ಅಜೀವ ಪರ್ಯಂತ ರಂಗೋಲಿ ಬರೆಯುವ ಹಾಗಿಲ್ಲ, ಮಂಟಪದ ಬಳಿ ಸುಳಿಯಲೂಬಾರದು. ಮದುವೆ ಸಮಾರಂಭದಲ್ಲಿ ಗಂಡಸರ ಕಣ್ಣಿಗೆ ಕಾಣದ ಜಾಗದಲ್ಲಿ-ಕುಳಿತು ಮದುವೆ ವೀಕ್ಷಿಸಬೇಕಾದ ಪರಿಸ್ಥಿತಿ ಈ ವಿಧವೆಯರದ್ದು.

ಗಂಡ ಸತ್ತರೂ 'ಮಂಡೆ ಬೋಳಿಸಿ' ಕೊಳ್ಳದಿದ್ದರೆ ಹಾಲು, ಮಜ್ಜಿಗೆ ತುಪ್ಪ ಬಿಡದಿದ್ದರೆ ಇವರೆಲ್ಲರು ಸೇರಿ ಅಂತವರ ಬಗ್ಗೆ ತುಂಬಾ ತುಚ್ಛವಾಗಿ ಮಾತಾಡುತ್ತಿದ್ದರು. ಹೀಗೆ ಸಂಪ್ರದಾಯದ-ಕಟ್ಟುಪಾಡಿಗೆ ಬಿದ್ದು ತಮಗೆ ತಾವೇ ನಿರ್ಭಂಧಗಳನ್ನು ನಿರ್ಮಿಸಿಕೊಂಡು ಸೊರಗುವ ಪರಿಸ್ಥಿತಿ ಅವರದ್ದು.

ಹಿರಿಯ ತಲೆಮಾರಿನ ಸಂಪ್ರದಾಯಸ್ಥ ಜನ ಆಧುನಿಕ ಯುವಕ ಯುವತಿಯರಲ್ಲೂ ತಮ್ಮ ಮನೋಭಾವವನ್ನೇ ತುಂಬಲು ಬಯಸುತ್ತಾರೆ. ರಾಮರಾಯರ ಮಗಳು ಮದುವೆ ಸಮಾರಂಭದಲ್ಲಿ ತೋಳಿಲ್ಲದ ರವಿಕೆಯಲ್ಲಿ ಬಂದದ್ದು ಹೆಬ್ಬಾಗಿಲಜ್ಜಿಗೆ ಅಸಹ್ಯವೆಂದೆನಿಸಿದೆ ಇಂದೆ. ನೆಡೆದ ಸುಬ್ಬತ್ತೆಯ ಮದುವೆ ವಿಷಯ ಕುರಿತು ಮಾತನಾಡುವಾಗ ಲತಾ 'ಅಹಾ! ನನ್ನ ಗಂಡನಾಗುವವನು ಆನೆಯ ಮೇಲೆ ಬರುವಂತಾದರೆ ನಾ ಹೊರಗೆ ಬಂದು ನೋಡುತ್ತಾ... ನಿಲ್ಲುತ್ತಿದ್ದೆ' ಎಂದೆನ್ನುತ್ತಾಳೆ. ಆಗ ಅಲ್ಲಿದ್ದವರಲ್ಲೊಬ್ಬರು 'ಲತ ಹೆಣ್ಣೇನು ಮಾನಮರ್ಯಾದೆಯನ್ನೆಲ್ಲ ಸುಟ್ಟು ತಿಂದಿದೆಯ? ಎಂದೆನ್ನುತ್ತಾರೆ. ಸಂಪ್ರದಾಯಸ್ಥ ಸಮಾಜದಲ್ಲಿ

ಹೆಣ್ಣು ತಾನು ಸ್ವತಂತ್ರವಾಗಿ ಮಾತನಾಡುವುದಕ್ಕೂ, ತನಗಿಷ್ಟವಾದ ಉಡುಗೆ-ತೊಡುಗೆಗಳನ್ನು ಬಳಸುವುದಕ್ಕೂ ನಿರ್ಬಂಧವಿದೆ.

'ಅಲ್ಲಲ್ಲಿನ ಲೋಕದವರು' ಎಂಬ ಕಥೆಯಲ್ಲಿ ಬ್ರಾಹ್ಮಣ ಸಮುದಾಯದ ಅತಿಯಾದ ಸಂಪ್ರದಾಯದ ಬಗ್ಗೆ ಮರುಕ ಪಡುವ ವಿಚಾರವಿದೆ. ಮಂಜಿ ಉಟ್ಟ ಸೀರೆ ಘಮ್ಮೆಂದು ವಾಸನೆ ಹೊಡೆದರೂ ಲಕ್ಷ್ಮಿದೇವಮ್ಮನ ಬಳಿ ತನ್ನ ಮಡಿ ವಿಚಾರವನ್ನು ಹೇಳುತ್ತಾ ಕಾರ್ತಿಕ ಮಾಸದ ಪ್ರತೀ ಸೋಮವಾರ ಒಂದಿಷ್ಟು ಅಕ್ಕಿ ತರಕಾರಿ ತಂದುಕೊಟ್ಟು ಲಕ್ಷ್ಮಿದೇವಮ್ಮನ ಕೈಯಿಂದಲೇ ಬೇಸಿಸಿಕೊಂಡು, ಹಿತ್ತಲಿಗೆ ಹೋಗಿ ಒಂದು ಮರಸಣಿಗೆ ಎಲೆಯನ್ನು ಕೊಯ್ದುತಂದು ತೊಳೆದು ಜಗಲಿ ತುದಿಯಲ್ಲಿ ಕುಡಿ ನೀರ ಮೇಲೆ ಮಾಡಿ ಹಾಕಿಕೊಂಡು ಗಿಂಡಿ ನೀರು ಇಟ್ಟುಕೊಂಡು ಕೂರುವಳು. ಲಕ್ಷ್ಮಿದೇವಮ್ಮನಿಂದಲೇ ಬಡಿಸಿಕೊಂಡು ಉಂಡು ಏಳುವ ಶಾಸ್ತ್ರದವಳು. ಅಕ್ಕಿ ತರುವುದು ಬೇಡವೆಂದು ಲಕ್ಷ್ಮಿದೇವಮ್ಮ ಹೇಳಿದರೆ ಹಾಗೆಲ್ಲ ಸುಮ್ಮನೆ ಉಣ್ಣುವುದಿಲ್ಲ ಎಂದೆನ್ನುತ್ತಾಳೆ. ನೀನು ಬ್ರಾಹ್ಮಣತಿಯಾಗುವವಳು, ತಪ್ಪಿ ಶೂದ್ರ ಜಾತಿಯಲ್ಲಿ ಹುಟ್ಟಬೇಕೆಂದು ಲಕ್ಷ್ಮಿದೇವಮ್ಮ ಯಾವಾಗಲೂ ಹೇಳುತ್ತಿದ್ದರು. ಅದಕ್ಕೆ ಮಂಜಿ 'ತಾನು ಬ್ರಾಹ್ಮಣಿಕೆಯಲ್ಲಿ ಯಾವುದರಲ್ಲಿ ಕಡಿಮೆ ಇದ್ದೇನೆ? ಈ ಶಾಸ್ತ್ರಗಳೆಲ್ಲ ಮುಂದಿನ ಜನ್ಮದಲ್ಲಿ ಈ ಜಾತಿಯಲ್ಲಿ ಹುಟ್ಟಲಿಕ್ಕಾಗಿಯೇ ಮಾಡುತ್ತಿರುವುದಲ್ಲವೇ? ಎನ್ನುತ್ತಾಳೆ. ಮಂಜಿಯ ಮಾತನ್ನು ಕೇಳಿದ ಗುಂಡಕ್ಕ 'ಮಂಜಿ ಗುಲಗಂಜಿ. ನಿಂಗೆ ಬಾಂಬ್ರ ಜಾತಿ ಯಂತಕ್ಕಾ? ಒಂದು ಮೀನಾ, ಕೋಳಿಯಾ, ಮಾಂಸವಾ? ಬರೀ ಚಪ್ಪೆ ಜಾತಿ. ಹೌದನಾ, ಈಗ ನೀನು ಯಂತಂತೆಲ್ಲ ಆದೆ! ಬಾಂಬ್ರ ಜಾತಿಯೊಳ್ಗ ಹುಟ್ಕಂಡಿದ್ರೆ ನಿನ್ನ ಬದುಕೊಕೆ ಬಿಡ್ತಿದ್ವಾ? ಉಸಿರಿದ್ದ ಹಾಗೆ ಸ್ಯಾಸ್ತಿದ್ದೋ' ಎಂದೆನ್ನುತ್ತಾಳೆ.

ಬ್ರಾಹ್ಮಣ ಸಮುದಾಯದ ಸಂಪ್ರದಾಯ ಇದರಿಂದ ಅನುಭವಿಸುವ ಯಾತನೆಯನ್ನು ಗುಂಡಕ್ಕೆ ತನ್ನ ಅನುಭವದ ಮೂಲಕ ತಿಳಿಸುತ್ತಾರೆ.

'ಒಂದು ಬಾಗಿಲ ಸದ್ದು' ಕಥೆಯಲ್ಲಿ ಸಾಲಿಗ್ರಾಮ ಶಿಲೆಯ ಬಗೆಗೆ ಜನರಲ್ಲಿನ ನಂಬಿಕೆಯನ್ನು ಲೇಖಕಿ ತಿಳಿಸುತ್ತಾರೆ. ಸಾಲಿಗ್ರಾಮ ಶಿಲೆಯನ್ನು ಸ್ತ್ರೀ, ಶೂದ್ರ, ಪತೀತ, ಷಂಡ ಮುಟ್ಟಿ ಪೂಜಿಸಬಾರದೆಂದ ನಂಬಿಕೆ ಇದೆ. 'ಸಾಲಿಗ್ರಾಮ' ಶಿಲಾರ್ಚನಗೂ ಹೆಣ್ಣು ಅನರ್ಹರೆಂದು ಬೃಹನ್ನಾರದೀಯ, ಪದ್ಮಪುರಾಣ ಮುಂತಾದವುಗಳನ್ನು ಆಧಾರಕ್ಕೆ ತೆಗೆದುಕೊಂಡು ಹೇಳುತ್ತಾರೆ. ಸಾಲಿಗ್ರಾಮ ಶಿಲೆ ಬರೀ ಕಲ್ಲಾದರು ಕಲ್ಲೆನ್ನಲು ಮನಸ್ಸೊಪ್ಪದು, ಜನರು ಆ ಕಲ್ಲಿನ ಬಗ್ಗೆ ಅತೀಯಾದ ನಂಬಿಕೆಯನ್ನು ಹೊಂದಿ ಅದಕ್ಕೆ ದೈವೀಸ್ವರೂಪವನ್ನು ನೀಡಿದ್ದಾರೆ. ಇದನ್ನು ದೇವರ ಗೂಡಿನಲ್ಲಿ ಸಣ್ಣ ಪೆಟ್ಟಿಗೆಯಲ್ಲಿಡುತ್ತಾರೆ. ಅದಕ್ಕೆ ಪ್ರತಿದಿನ ವಿಶೇಷ ಮಡಿ ಮಂತ್ರದಿಂದ ಅಭಿಷೇಕವಾಗಬೇಕು, ನೈವೇದ್ಯವಾಗಬೇಕು. ಈ ಪೂಜೆ ಮುಡಿ ಅನ್ನ ಸಂತರ್ಪಣೆಗೆ ಸಮಾನ.

ಅದರ ಅಭಿಷೇಕ ಎಲ್ಲರಿಗೂ ಪವಿತ್ರ ತೀರ್ಥ. ಹೀಗೆ ಸಾಲಿಗ್ರಾಮ ಶಿಲೆಯ ಬಗೆಗೆ ಜನರಿಗಿರುವ ನಂಬಿಕೆ, ಮಡಿ-ಮೈಲಿಗೆ ವಿಚಾರಗಳನ್ನು ಲೇಖಕಿ ತಮ್ಮ ಕಥೆಯಲ್ಲಿ ತಿಳಿಸಿದ್ದಾರೆ.

ಹೀಗೆ ಈ ಮೇಲಿನ ಕಥೆಗಳಲ್ಲಿ ವೈದೇಹಿಯವರು ಕರಾವಳಿ ಪ್ರದೇಶದ ಜನರ ಸಂಪ್ರದಾಯ, ನಂಬಿಕೆ, ಆಚಾರ- ವಿಚಾರ, ಉಡುಗೆ-ತೊಡಿಗೆ, ಮಡಿ-ಮೈಲಿಗೆ ಮೊದಲಾದವನ್ನ ತಿಳಿಸುವ ಪ್ರಯತ್ನ ಮಾಡಿದ್ದಾರೆ. ಇವರ ಕಥೆಗಳು ಬಹುವಾಗಿ ಬ್ರಾಹ್ಮಣ-ಕುಟುಂಬವನ್ನೇ ಆಧಾರವಾಗಿಟ್ಟುಕೊಂಡಿವೆ. ಲೇಖಕಿ ತಮ್ಮ ಬರಹಗಳ ಮೂಲಕ ಬ್ರಾಹ್ಮಣ ಸಮುದಾಯದ ಜನರು ಸಂಪ್ರದಾಯವೇ ಕಾರಣವಾಗಿ ಅನುಭವಿಸುವ ಕಷ್ಟನಷ್ಟಗಳನ್ನು ಮನಮಿಡಿಯುವಂತೆ ಚಿತ್ರಿಸಿದ್ದಾರೆ.

## ಕಥೆಗಳಲ್ಲಿ ಕಂಡುಬರುವ ಸ್ತ್ರೀ ಸಂವೇದನೆ

ವೈದೇಹಿಯವರು ತಮ್ಮ ಬರಹಗಳಲ್ಲಿ ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ಸ್ತ್ರೀಯ ಸ್ಥಾನ. ಸಮಾಜದ ವಿವಿಧ ಸ್ತರದ ಹೆಂಗಸರು ಅವರ ಅಂತರಂಗದ ಬದುಕಿನ ಬಗ್ಗೆ ಗಮನ ಹರಿಸುತ್ತಾರೆ. ಇಲ್ಲಿ ಪರಂಪರೆಯನ್ನೇ ನಂಬಿರುವ ಹೆಂಗಸರು ಹಾಗೆಯೆ ಆಧುನಿಕತೆಯನ್ನು ಮೈಗೂಡಿಸಿಕೊಂಡವರು ಇದ್ದಾರೆ. ಹೆಣ್ಣೊಬ್ಬಳು ತನ್ನ ತಂದೆ-ತಾಯಿಯ ಮನೆಯಲ್ಲಿ ಮನೆಯವರೆಲ್ಲರ ಏಳಿಗೆಗಾಗಿ ಶ್ರಮಿಸುತ್ತಾಳೆ. ಈಕೆ ತನ್ನ ಆಸೆ, ಆಕಾಂಕ್ಷೆಗಳನ್ನೆಲ್ಲಾ ಮನದಾಳದಲ್ಲಿ ಹುದುಗಿಸಿಟ್ಟುಕೊಂಡು ಹಿರಿಯರು ಹೇಳಿದವರನ್ನು ಮದುವೆಯಾಗುತ್ತಾರೆ. ಹೆಣ್ಣಿನ ಮನಸ್ಸಿನ ಭಾವನೆಯನ್ನು ಯಾರೊಬ್ಬರು ಅರ್ಥಮಾಡಿಕೊಳ್ಳುವುದಿಲ್ಲ. ಮದುವೆಯಾಗಿ ಗಂಡನ ಮನೆಗೆ ಹೋದ ನಂತರ ಅಲ್ಲಿ ಗಂಡ, ಅತ್ತೆ, ಮಾವರ ಸೇವೆ ಮಾಡಿ ಸಂಸಾರದೂಡುತ್ತಾಳೆ. ಮಕ್ಕಳಾದ ಮೇಲೆ ಅವರ ಪೋಷಣೆ ಮಾಡುತ್ತ ಕಳೆಯುತ್ತಾರೆ. ಹೀಗೆ ಜೀವನದ ಆರಂಭದಿಂದ ಇತರರ ಸೇವೆಯಲ್ಲಿ ತೊಡಗಿ ಅವರ ಅಭಿವೃದ್ಧಿಯನ್ನು ಕಂಡು ತಾನು ಸಂತೋಷಪಡುತ್ತಾಳೆ. ವೈದೇಹಿ ತಮ್ಮ ಬರಹಗಳಲ್ಲಿ ಸ್ತ್ರೀಸಂವೇದನೆಯನ್ನು ತುಂಬಾ ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ.

'ಮದುವೆ-ಹೆಣ್ಣು-ಸೀರೆ' ಎಂಬ ಕಥೆಯಲ್ಲಿ ಸಂಬಂಧಕ್ಕಿಂತ ಹಣವೇ ಮುಖ್ಯವೆಂಬತ್ತಾಗುತ್ತದೆ. ಇದರಿಂದ ಬಡ ಹೆಣ್ಣೊಬ್ಬಳು ಅನುಭವಿಸುವ ಯಾತನೆ ಇದೆ. ಈ ಕಥೆಯಲ್ಲಿ ರಾಮಣ್ಣ ಮತ್ತು ಸುಮ ಪ್ರಮುಖ ಪಾತ್ರವಾಗಿದೆ. ರಾಮಣ್ಣ ಸುಮಳ ದೊಡ್ಡಪ್ಪನ ಮಗ. ಸುಮಳಿಗೆ ಆತ ಒಡಹುಟ್ಟಿದ ಅಣ್ಣನಿಗಿಂತ ಹೆಚ್ಚು. ಸುಮಳ ಮದುವೆಯ ನಂತರ ಈಕೆಯ ಮನೆಗೆ ಬಂದ ದೊಡ್ಡಪ್ಪ ಇವಳ ಬಡಪರಿಸ್ಥಿತಿಯನ್ನು ಕಂಡು ಆಕೆ 'ಏನೂ ಪ್ರಯೋಜನವಿಲ್ಲ' ಎಂಬಂತೆ ನೋಡಿ ಕಾಫಿ ಲೋಟ ನೆಲಕ್ಕೆ ಕುಕ್ಕಿದ್ದರು. ಇದರಿಂದ ಸುಮ ತುಂಬಾ ನೊಂದಿದ್ದಳು. ರಾಮಣ್ಣನ ಮದುವೆಗಾಗಿ ಈಕೆ ಗಂಡನ ಓದಿಗಾಗಿ ಇಟ್ಟ ದುಡ್ಡನ್ನು ತೆಗೆದುಕೊಂಡು ಒಂದು ಸೀರೆ ಕೊಂಡಳು. ಅಂತೂ ಮದುವೆಗೆ ಹೋದಳು ಅಲ್ಲಿ ಎಲ್ಲಾ ಶ್ರೀಮಂತರ ಮನೆಯವರು ಬಂದಿರುತ್ತಾರೆ. ಯಾರೊಬ್ಬರು ಈಕೆಯನ್ನು ಮಾತಾಡಿಸುವುದಿಲ್ಲ. ರಾಮಣ್ಣ ಮತ್ತು ದೊಡ್ಡಮ್ಮ ಕೂಡ ಒಣಮಾತನ್ನಾಡುತ್ತಾರೆ. ಇದರಿಂದ ಸುಮ ಬಹಳ ನೊಂದುಕೊಳ್ಳುತ್ತಾಳೆ. ಇಲ್ಲಿ ಶ್ರೀಮಂತಿಕೆಯಿಲ್ಲದೆ ಬಡತನಕ್ಕೆ ಗುರಿಯಾಗಿ ಅವಮಾನವಾಗುವ ವಿಚಾರವಿದೆ. ಸಮಾಜದಲ್ಲಿ ಹಣಕ್ಕೆ ಬೆಲೆ, ವ್ಯಕ್ತಿ ಅಥವಾ ವ್ಯಕ್ತಿತ್ವಕ್ಕಲ್ಲ.

'ಅವಲಂಬಿತರು' ಕಥೆಯಲ್ಲಿ ಹೆಣ್ಣು ಹೆಣ್ಣೊಬ್ಬಳನ್ನು ಶೋಷಿಸುವ ಸಮಾಜದ ಇನ್ನೊಂದು ಮುಖವಿದೆ. ಬಡತನವೇ ಕಾರಣವಾಗಿ ಸೂಚಮ್ಮ ತನ್ನ ಮಗಳು ಅಹಲ್ಯಳನ್ನು ಶಾರದೆಯ ಮನೆಗೆ

ಮಗುವಾಡಿಸಲು, ಮನೆ ಕೆಲಸ ಮಾಡಲು ಕಳಿಸುತ್ತಾಳೆ. ಅಹಲ್ಯೆ ತುಂಬಾ ಅನುಭವವಿರುವ ಹಾಗೆ ಮಗುವಿನ ಎಲ್ಲಾ ಕೆಲಸ ಮತ್ತು ಮನೆಯ ಕೆಲಸವನ್ನು ತುಂಬಾ ಅಚ್ಚುಕಟ್ಟಾಗಿ ಮಾಡುತ್ತಾಳೆ. ಇವಳು ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಯಾವುದೇ ಸಂಬಳವನ್ನು ಆಕೆಗೆ ಶಾರದೆ ನೀಡುವುದಿಲ್ಲ. ಎಲ್ಲಾ ಹೆಣ್ಣುಮಕ್ಕಳಂತೆ ತನಗೆ ಎಲ್ಲಾ ಆಸೆ ಆಕಾಂಕ್ಷೆಗಳಿದ್ದರು ಅವೆಲ್ಲವನ್ನು ಅದುಮಿಟ್ಟುಕೊಂಡು ಅವರ ಸೇವೆ ಮಾಡುತ್ತಾಳೆ. ಹೀಗೆ ನಿಸ್ವಾರ್ಥ ಸೇವೆ ಮಾಡಿದರು ಶಾರದೆ ಆಕೆಯನ್ನು ಶೋಷಿಸುತ್ತಾಳೆ. ಅಹಲ್ಯೆ ಮೈನೆರೆದ ತಕ್ಷಣ ಆಕೆಯನ್ನು ಕೆಲಸದಿಂದ ಬಿಡಿಸಿ ಮನೆಗೆ ಕಳಿಸುತ್ತಾಳೆ. ಹೆಣ್ಣಿನಲ್ಲಿ ನೈಸರ್ಗಿಕವಾಗಿ ನಡೆಯುವ ಕ್ರಿಯೆಯನ್ನು ಏನೋ ಅಪರಾಧವೆಂಬಂತೆ ಕಂಡು ಹೆಣ್ಣಿನ ಮನಸ್ಸನ್ನು ನೋಯಿಸುವ ವಿಚಾರವನ್ನು ಲೇಖಕಿ ತಿಳಿಸುತ್ತಾರೆ.

'ಸೌಗಂಧಿಯ ಸ್ವಗತಗಳು' ಕಥೆಯಲ್ಲಿ ಹೆಣ್ಣೊಬ್ಬಳು ಸ್ವತಂತ್ರವಾಗಿ ಬದುಕಲು ಬಯಸುತ್ತಾಳೆ. ತಂದೆ ತಾಯಿಯರ ಅತಿಯಾದ ಜವಬ್ದಾರಿಯೇ ಸೌಗಂಧಿಗೆ ಬಂಧನವಾಗುತ್ತದೆ. ಸೌಗಂಧಿಗೆ ಬೇರೆ ಊರಿಗೆ ವರ್ಗವಾಗುತ್ತದೆ. ಆಕೆಯನ್ನು ಬಸ್ಸು ಹತ್ತಿಸಲು ಬಂದಿದ್ದ ಅವರ ತಂದೆ ಈಕೆ ಕೇಳದಿದ್ದರು ಹೆಂಗಸರನ್ನೇ ಪಕ್ಕದಲ್ಲಿ ಕೂರಿಸುವಂತೆ ಕಂಡಕ್ಟರರಿಗೆ ಹೇಳಿಹೋದರು. ಬೇರೆ ಊರಿಗೆ ಹೋಗಿ ಅಲ್ಲಿ ಸೌಗಂಧಿ ಮನೆಮಾಡುತ್ತಾಳೆ ಅಲ್ಲಿ ಮನೆಯೊಡತಿಯು ಈಕೆಯ ಬಗ್ಗೆ ಅತಿಯಾದ ಕಾಳಜಿ ವಹಿಸುತ್ತಾಳೆ. ಇದು ಸೌಗಂಧಿಗೆ ಒಂದು ರೀತಿಯ ಬಂಧನವೆನಿಸುತ್ತದೆ. ಒಮ್ಮೆ ಮನೆಯೊಡತಿ ಮನೆಯಲ್ಲಿರುವುದಿಲ್ಲ ಆ ಸಮಯದಲ್ಲಿ ಸೌಗಂಧಿಯ ತಂದೆ-ತಾಯಿಗಳೇ, ಮನೆಗೆ ಬರುತ್ತಾರೆ. ಸೌಗಂಧಿ ಎಲ್ಲೂ ತನ್ನ ಸಹಜವಾದ ಆಕಾಂಕ್ಷೆಗಳನ್ನು ಹೊರಹಾಕುವುದಕ್ಕೆ ಮನೆಯವರು ಅವಕಾಶನೀಡುವುದಿಲ್ಲ ಹೀಗೆ ಅತಿ ಪ್ರೀತಿಯಿಂದಲೇ ಈಕೆಯ ಸ್ವಾತಂತ್ರ ಅಪಹರಣವಾಗುತ್ತದೆ.

'ಗೂಡಿನೊಳಗೆ ಒಂದು ಹಕ್ಕಿ' ಕಥೆಯಲ್ಲಿ ಮಾಲತಿ ತನಗಿಷ್ಟವಾದ ಹಾಗೆ ಇರಲು ಬಯಸುತ್ತಾಳೆ. ಒಂದು ದಿನ ಗಂಡನಿಗೆ ಹೊರಗೆ ಬಾಗಿಲಿಗೆ ಬೀಗಹಾಕಿಕೊಂಡು ಹೋಗುವಂತೆ ಹೇಳುತ್ತಾಳೆ. ಮನೆಯಲ್ಲಿ ಒಬ್ಬಳೇ ಇದ್ದರು ಯಾರಾದರೂ ಬರುತ್ತಾರೇನೋ ಎಂದೆನಿಸುತ್ತದೆ. ಬಚ್ಚಲಿನ ಬಾಗಿಲು ತೆರೆದೆ ಸ್ನಾನಮಾಡಿದಳು. ಮಾಲತಿಗೆ ತೆರೆದ ಬಚ್ಚಲಲ್ಲಿ ಅಮ್ಮ ಸ್ನಾನಮಾಡಿಸುತ್ತಿದ್ದುದು ನೆನಪಾಯಿತು. ಮೈ ಮೇಲೆ ಬಟ್ಟೆ ಹೆಚ್ಚಿದಂತೆ ಬಾಗಿಲು ಭದ್ರವಾಯಿತು. ಮನುಷ್ಯ ತನ್ನನ್ನು ತಾನೇ ಹೇಗೆ ಬಂಧಿಸಿಕೊಳ್ಳುತ್ತಾನೆ! ಕುದುರೆಯಂತೆ! ಎಂದೆನಿಸುತ್ತದೆ. ಮಾಲತಿಗೆ ಆಡಂ ಮತ್ತು ಈವ್ ಈ ಶತಮಾನದ ಮನುಷ್ಯರಿಗಿಂತ ಎಷ್ಟೋ ಬುದ್ಧಿವಂತರು ಮತ್ತು ನಿರ್ಬಂಧರೆನಿಸುತ್ತದೆ. ಹಂಡೆಯಲ್ಲಿ ನೀರು ಖಾಲಿಯಾದಂತೆ ಶಿಳ್ಳೆ ಹೊಡೆಯಬೇಕು ಎಂದೆನಿಸುತ್ತದೆ. ಆದರೆ ಹಾಗೆ ಮಾಡಿದರೆ ಯಾರಾದರು ಬರಬಹುದೆಂದು ಸುಮ್ಮನಾದಳು. ಸ್ನಾನಮಾಡಿ

ಬೆತ್ತಲೆಯಾಗಿ ಮನೆಯಲ್ಲಿ ಓಡಾಡಿದಳು. ಅಲ್ಲಿದ್ದ ಸಿಗರೇಟು ಸೇದಲು ಪ್ರಯತ್ನಿಸಿದಳು. ಒಂದು ದಿಮ್ ಒಳಗೆಳೆಯುತ್ತಲೆ ಕೆಮ್ಮು ಬರುತ್ತೆ. ಬಾಯಿಗೆ ಕೈ ಅಡ್ಡ ಇಟ್ಟುಕೊಂಡು ಮೆಲ್ಲನೆ ಕೆಮ್ಮಿದಳು. ರೇಡಿಯೋ ಹಾಕಬೇಕೆನಿಸುತ್ತದೆ ಆದರೆ ಹೊರಗೆ ಯಾರಿಗಾದರೂ ಕೇಳಿದರೆ ಕಷ್ಟ ಎಂದು ಸುಮ್ಮನಾದಳು. ತಿರುಗಾಡುತ್ತಿದ್ದ ಆಕೆಗೆ ಬೋನಿಗೆ ಹಾಕಿದ ಹುಲಿಯಂತೆ ಅನಿಸಿತು. ಸುತ್ತಲಿನ ಗೋಡೆಗಳು ಪಂಜರದ ಹಾಗೆ ಕಂಡವು. ಅಂದರೆ ಇಲ್ಲಿ ಸ್ತ್ರೀಯೊಬ್ಬಳು ತಾನು ಸ್ವತಂತ್ರವಾಗಿದ್ದೇನೆ ಎಂದು ಕೊಳ್ಳುತ್ತಾಳೆ. ಆದರೆ ಆಕೆಗೆ ತಿಳಿಯದ ಹಾಗೆ ಸುತ್ತಲಿನ ಪರಿಸರದಿಂದ ನಿರ್ಬಂದಕ್ಕೆ ಒಳಗಾಗಿರುತ್ತಾಳೆ.

'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು ಕಥೆಯಲ್ಲಿ ಸಂಪ್ರದಾಯಸ್ಥ ಹಳೆಯ ಧೋರಣೆಯ ಪುಟ್ಟಮ್ಮತ್ತೆ ಮತ್ತು ಆಧುನಿಕ ಮನೋಭಾವದ ಕಮಲಾವತಿಯ ಕುರಿತಾದ ಕಥೆಯಿದೆ. ಹೆಣ್ಣೊಬ್ಬಳು ತನ್ನ ಆಸೆ, ಆಕಾಂಕ್ಷೆಗಳನ್ನ ಹೊರಹಾಕಿ ಸ್ವಲ್ಪ ಸ್ವತಂತ್ರವಾಗಿರಲು ಬಯಸಿದರೆ ಸಮಾಜ ಅವರನ್ನು ನೋಡುವ ರೀತಿಯನ್ನು ಈ ಕಥೆಯಲ್ಲಿ ಲೇಖಕಿ ಚಿತ್ರಿಸಿದ್ದಾರೆ. ಶೇಷಮ್ಮನ ಮಗಳು ಸೌದಾಮಿನಿಯನ್ನು ನೋಡಲಿಕ್ಕೆಂದು ಗಂಡಿನ ಕಡೆಯವರು ಬರುತ್ತಾರೆ. ಆಗ ಅಲ್ಲಿ ಕಮಲಾವತಿ ಹೋಗಿದ್ದಳು. ಗಂಡು ಈಕೆಯನ್ನು ನೋಡಿ ನಕ್ಕಿದ್ದನು. ಸಂಜೆಯಾಗುತ್ತಲೇ ರಂಗಪ್ಪಯ್ಯನ ಮನೆಯಿಂದ ಪುಟ್ಟಮ್ಮತ್ತೆಗೆ ಕರೆಬಂದಿತು. ನಿನ್ನ ಮೊಮ್ಮಗಳು ಗಂಡು ಬರುವ ಸಮಯಕ್ಕೆ ನಮ್ಮ ಮನೆಗೆ ಏಕೆ ಬರಬೇಕಿತ್ತು? ಈಗಿನವರಿಗೆ ಬೇಕಾಗಿರುವುದು ಬಿಳಿ ಚರ್ಮ ಎಂದು ರಂಗಪ್ಪಯ್ಯ ಈಕೆಯ ಮೇಲೆ ರೇಗಾಡುತ್ತಾನೆ. ರಂಗಪ್ಪಯ್ಯನ ಮಾತು ಕೇಳಿ ಪುಟ್ಟಮ್ಮತ್ತೆಗೆ ಮೊಮ್ಮಗಳ ಮೇಲೆ ಸಿಟ್ಟು ಬರುತ್ತದೆ. ಅಲ್ಲಿಯೇ ಇದ್ದ ಆಕೆಗೆ ಮನೆಗೆ ಬರುವಂತೆ ಕಣ್ಣು ಕೆಂಚರಿಸಿದಳು. ಸೀದ ಮನೆಗೆ ಬಂದ ಕಮಲಾವತಿ ಮೈಮೇಲೆ ದೈವ ಬಂದವರಂತೆ ನೀರು ಎತ್ತಿ ಎತ್ತಿ ಕೈತೊಳೆಯುವ ಬಾನಿ ತುಂಬಿಸುತ್ತಾಳೆ. ರಂಗಪ್ಪಯ್ಯನ ಮನೆಗೆ ಬಂದವರು ಹೊರಡುತ್ತಿರುವುದನ್ನು ಕಿಟಕಿ ಕಿಂಡಿಯಿಂದ ಪುಟ್ಟಮ್ಮತ್ತೆ ನೋಡಿದಳು. ಅವರೆಲ್ಲ ಹೋಗುವ ಸಮಯಕ್ಕೆ ಈ ವೇಶ ಬೇಡ ಒಳಗೆ ಬಾ ಎಂದು ಪುಟ್ಟಮ್ಮತ್ತೆ ಕಮಲಾವತಿಗೆ ಹೇಳುತ್ತಾರೆ. ಇದರಿಂದ ಕೋಪಗೊಂಡ ಕಮಲಾವತಿ 'ಅಜ್ಜೀ, ಇದು ನಮ್ಮನೆ ಬಾಮಿಕಟ್ಟೆ, ರಂಗಪ್ಪಯ್ಯನ ಮನೆ ಪಡಸಾಲೆಯಲ್ಲ' ಎಂದು ಉರಿಯುತ್ತಿರುವ ಸ್ವರದಲ್ಲಿ ಉತ್ತರಕೊಟ್ಟಳು. ಇಲ್ಲಿ ಕಮಲಾವತಿ ತನ್ನ ಮನಸ್ಸಿನ ಭಾವನೆಗಳನ್ನು ಹೊರಹಾಕದ ಪರಿಸ್ಥಿತಿಯಲ್ಲಿದ್ದಾಳೆ. ಸೌದಾಮಿನಿಗಿಂತ ಯಾವುದರಲ್ಲಿಯೂ ಕಡಿಮೆ ಇಲ್ಲದ ಕಮಲಾವತಿ ಬಡತನವೇ ಕಾರಣವಾಗಿ ತನಗಿಷ್ಟವಾದವನೊಡನೆ ಮದುವೆಯಾಗಲು ಸಾಧ್ಯವಾಗುತ್ತಿಲ್ಲ ಪರಮೇಶ್ವರರಾಯರು ಮರಿಯಣ್ಣನೊಡನೆ ಮದುವೆ ಮಾಡಿ ಎನ್ನುತ್ತಾರೆ. ಆದರೆ ಕಮಲಾವತಿ ಬಡಸ್ಥಿತಿಯಲ್ಲಿರುವ ಆತನನ್ನು ತಿರಸ್ಕರಿಸುತ್ತಾಳೆ. ಸೌದಾಮಿನಿ ವಿದ್ಯೆಯಲ್ಲಿ

ರೂಪದಲ್ಲಿ ಕಮಲಾವತಿಗಿಂತ ಹಿಂದೆ ಆಕೆಗೆ ಸಿಕ್ಕಂತಹ ಗಂಡು ನನಗೇಕೆ ಸಿಗುವುದಿಲ್ಲ ಎಂದೆನಿಸುತ್ತದೆ. ತನ್ನನ್ನು ಕಂಡರೆ ಸುತ್ತಲಿನವರಿಗೆಲ್ಲ 'ಒಂದು ಸಣ್ಣ ಗೂಡಿನಲ್ಲಿ ಹೊಗೆಹಿಡಿದ ಅಡುಗೆಮನೆಯಲ್ಲಿ ಲಗ್ತು ಎನಿಸೀತು ಇವರಿಗೆಲ್ಲ' ಎಂದುಕೊಳ್ಳುತ್ತಾರೆ. ಆಧುನಿಕ ಮನೋಭಾವದ ಈಕೆ ರೂಪದಲ್ಲಿ, ವಿದ್ಯೆಯಲ್ಲಿ, ಚುರುಕುತನದಲ್ಲಿ ಇತರರಿಗಿಂತ ಮೇಲಿದ್ದರೂ ಕೂಡ ಇವರು ಬಡವರಾದದ್ದೇ ಕಾರಣವಾಗಿ ಇವರಿಗೆ ಹೇಳುವ ಸಂಬಂಧವು ಕೆಳಮಟ್ಟದಲ್ಲಿಯೇ ಇರುತ್ತಿದ್ದವು. ಎಲ್ಲರಂತೆ ತಾನು ಮದುವೆಯಾದ ಮೇಲೆ ಒಳ್ಳೆಯ ಜೀವನ ನಡೆಸಬೇಕು. ಆರ್ಥಿಕವಾಗಿ ಉತ್ತಮವಾಗಿರಬೇಕೆಂದು ಬಯಸುತ್ತಾಳೆ. ಆದರೆ ಯಾರೊಬ್ಬರು ಆಕೆಯ ಮನೋಸ್ಥಿತಿಯನ್ನ ಅರಿಯದ ಸ್ಥಿಥಿಯಲ್ಲಿದ್ದಾರೆ. ಸ್ತ್ರೀಸಹಜವಾದ ಬಯಕೆಗಳನ್ನು ಕಮಲಾವತಿ ವ್ಯಕ್ತಪಡಿಸಿದರು ಸಮಾಜ ಅದನ್ನ ತಿರಸ್ಕಾರದಿಂದ ಕಾಣುವುದನ್ನು ಕಾಣಬಹುದಾಗಿದೆ.

ವೈದೇಹಿ ಬರಹಗಳ ಕೇಂದ್ರ ಹೆಣ್ಣು ಈ ಹೆಣ್ಣು ವಿವಿಧ ಜಾತಿ, ವಯಸ್ಸು, ಅಂತಸ್ಥು, ಸಂವೇದನೆಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ತೀರಾ ಸಂಪ್ರದಾಯಸ್ಥರಿಂದ ತೀರಾ ಆಧುನಿಕರವರೆಗೆ, ಅವಿವಾಹಿತೆಯರಿಂದ ವಿಧವೆಯರ ವರೆಗೆ, ಗೃಹಿಣಿಯರಿಂದ ವೇಶ್ಯೆಯರವರೆಗೆ ಈ ಪ್ರಪಂಚ ಹರಡಿಕೊಳ್ಳುತ್ತದೆ. ಇಲ್ಲಿ ವಿದ್ಯಾವಂತರು, ಅವಿದ್ಯಾವಂತರು, ಕಳ್ಳರು, ಹುಚ್ಚರು ಇದ್ದಾರೆ, ಶೋಷಿಸುವವರು ಶೋಷಣೆಗೆ ಒಳಗಾದವರು ಇದ್ದಾರೆ. ಅಂದರೆ ವೈದೇಹಿ ಕಥೆಗಳಲ್ಲಿ ಹೆಣ್ಣು ಒಂದು ಸಿದ್ಧಮಾದರಿಯಲ್ಲಿ ಕಾಣಿಸಿಕೊಳ್ಳದೆ ವಿವಿಧ ಆಕೃತಿಗಳಲ್ಲಿ, ಭಾವಸ್ಥಿತಿಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ವೈವಿಧ್ಯವೆ, ಬಹುರೂಪತೆ ಬಹುಧ್ವನಿಗಳೇ ವೈದೇಹಿಯವರನ್ನು ನಮ್ಮ ಕಾಲದ ಬಹುಮುಖ್ಯ ಬರಹಗಾರ್ತಿಯರಲ್ಲಿ ಒಬ್ಬರನ್ನಾಗಿ ಮಾಡಿರುವುದು.

ಜೀವನವೆನ್ನುವುದು ಅಸಂಖ್ಯ ಬಣ್ಣ, ಚಹರೆ, ವಾಸನೆಗಳಿಂದ ಕೂಡಿರುವಂತದ್ದು. ಎಂಬ ಸಂಕೀರ್ಣ ಗ್ರಹಿಕೆಯೂ, ಒಂದು ಮಾನವೀಯ ಸನ್ನಿವೇಶದ ಹಿಂದೆ ಹಲವು ಬಗೆಯ ಒತ್ತಡಗಳಿರುತ್ತವೆ ಎಂಬ ಗಾಢ ತಿಳುವಳಿಕೆಯು ಇಲ್ಲಿ ಕೆಲಸಮಾಡಿದೆ. ಅವರು ಬದುಕನ್ನು ಹೆಣ್ಣಿನ ದೃಷ್ಟಿಕೋನದಿಂದ ಗಮನಿಸುತ್ತಾರೆ. ಆದರೆ ಸರಳವಾದ 'ಸ್ತ್ರೀಪರ', 'ಪುರುಷವಿರೋಧಿ' ತೀರ್ಮಾನಗಳಲ್ಲಿ ಪರ್ಯಾವಸನಗೊಳ್ಳುವುದಿಲ್ಲ ಲಿಂಗ ಅಸಮಾನತೆಯ ಪ್ರಶ್ನೆಗಳನ್ನು ಅವರು ತುಂಬ ಪ್ರಬುದ್ಧವಾಗಿ ನಿರ್ವಹಿಸಿದ್ದಾರೆ. ಯಾವುದೇ ಮನುಷ್ಯರ ಅಥವಾ ವರ್ಗಗಳ ಜೀವನ ಸಾಫಲ್ಯಗಳ ಪ್ರಶ್ನೆಯು ಎಲ್ಲಾ ಮನುಷ್ಯರ ಮತ್ತು ವರ್ಗಗಳೊಂದಿಗೆ ಒಟ್ಟಾರೆ ಸಂಬಂಧದ ಪ್ರಶ್ನೆಯೇ ಆಗಿರುತ್ತದೆ. ಎಂಬ ಎಚ್ಚರದಲ್ಲಿ ಅವರು ಜೀವನ ಸಂದರ್ಭಗಳನ್ನು ಪರಿಶೀಲಿಸುತ್ತಾರೆ. ಲೇಖಕಿಗೆ ವಸ್ತು ಯಾವುದೇ ಆಗಿರಲಿ, ಸನ್ನಿವೇಶಗಳು ಯಾವುದೇ ಆಗಿರಲಿ ಅವುಗಳನ್ನು ನಿರ್ವಹಿಸುವ ಪ್ರಜ್ಞೆಮಾತ್ರ

ಸ್ತ್ರೀಪ್ರಜ್ಞೆಯೇ, ವೈದೇಹಿಯವರು ಸಿದ್ಧಾಂತಗಳ ಮೂಲಕ ಬದುಕನ್ನು ಗ್ರಹಿಸುವವರಲ್ಲ. ಆದರೆ ಅವರ ಗ್ರಹಿಕೆ ಮತ್ತು ಅಭಿವ್ಯಕ್ತಿಗಳ ಸ್ವರೂಪ ಹೇಗಿದೆಯೆಂದರೆ ಬರೆದವರು ಯಾರೆಂದು ಗೊತ್ತಿಲ್ಲದಿದ್ದರು ಬರವಣಿಗೆಯನ್ನು ಮಾಡಿದವರು ಸೂಕ್ಷ್ಮ ಮನಸ್ಸಿನ ಓರ್ವ ಲೇಖಕಿಯೇ ಇರಬೇಕು ಎನ್ನುವಷ್ಟು ಅವರ ಸ್ತ್ರೀಸಂವೇದನೆ ಗಾಢವಾಗಿದೆ.

## ಸಮಾಜದಲ್ಲಿ ಕಂಡು ಬರುವ ಲಿಂಗ ತಾರತಮ್ಯ

ಭಾರತವು ಪುರಾತನ ಕಾಲದಿಂದಲೂ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನೆ ಉಳಿಸಿಕೊಂಡು ಬಂದಿದೆ. ಈ ವ್ಯವಸ್ಥೆಯೆ ಮಹಿಳೆಯರ ಶೋಷಣೆಗೆ ಕಾರಣವಾಗಿದೆ. ಸ್ವತಂತ್ರಪೂರ್ವ ಮತ್ತು ಸ್ವತಂತ್ರ ನಂತರ ಸಂದರ್ಭದಲ್ಲಿ ಕೌಟುಂಬಿಕ ವ್ಯಾಪ್ತಿಯಲ್ಲಿ ಸ್ತ್ರೀಯರು ಅಪಾರವಾದ ಹಿಂಸೆಗೆ ಒಳಗಾಗಿದ್ದಾರೆ. ಭಾರತದ ಮಹಿಳಾ ಚಳುವಳಿಗಳು ಸಮಾಜದ ಮೂಲಭೂತ ಅಂಗವಾದ ಕುಟುಂಬಗಳ ಕುರಿತಂತೆ ಹಲವಾರು ಪ್ರಶ್ನೆಗಳನ್ನು ಎತ್ತಿವೆ ಕುಟುಂಬವು ಸ್ತ್ರೀಯರಿಗೆ ಸುರಕ್ಷತೆ ಒದಗಿಸುವ ಸ್ತ್ರೀಯರನ್ನು ಗೌರವಿಸುವ ಸಂಸ್ಥೆಯೇ ಎಂಬುದರ ಪರಿಶೀಲನೆಗೆ ತೊಡಗಿವೆ. ಆದರೂ ಈ ನಾಗರೀಕ ಜಗತ್ತಿನ ಹಲವು ಬಗೆಯ ಹಿಂಸೆಗಳಿಗೆ ಹೆಣ್ಣು ಒಳಗಾಗುತ್ತಲೇ ಬಂದಿದ್ದಾಳೆ ಮೊದಲಿಗೆ ಹೆಣ್ಣು ಭ್ರೂಣಗಳು ಹಾಗು ಹೆಣ್ಣು ಶಿಶು ಹತ್ಯೆಯು ತವರಿನಲ್ಲೇ ಎದುರಿಸುವ ಎರಡು ಪ್ರಮುಖ ಹಿಂಸೆ. ತವರಿನಲ್ಲಿ ಅನುಭವಿಸುವ ಇನ್ನೊಂದು ಹಿಂಸೆ ಲಿಂಗತಾರತಮ್ಯ. ತಂದೆ ತಾಯಿಯರು ಗಂಡುಮಕ್ಕಳಿಗೆ ಕೇಳಿದ್ದನ್ನೆಲ್ಲ ಕೊಡಿಸಿ ತುಂಬ ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ಆದರೆ ಹೆಣ್ಣು ಮಕ್ಕಳಿಗೆ ಈ ಭಾಗ್ಯವಿಲ್ಲ. ಮದುವೆಯನಂತರ ಕೌಟುಂಬಿಕ ಹಿಂಸೆಯನ್ನು ಅನುಭವಿಸುತ್ತಾಳೆ. ಅಲ್ಲದೆ ಬಾಲ್ಯವಿವಾಹ, ಬಹುಪತ್ನಿತ್ವ, ವೈಧವ್ಯ ಹಿಂಸೆಯ ವಿವಿಧ ಮುಖಗಳು. ವಿವಾಹಿತ ಮಹಿಳೆಯ ಸಂದರ್ಭದಲ್ಲಿ ಕೌಟುಂಬಿಕ ಹಿಂಸೆಗೆ ಕಾರಣವಾಗುವ ಅತ್ಯಾಚಾರ, ವರದಕ್ಷಣೆ, ವಿಚ್ಛೇದನ, ಅನೈತಿಕ ಸಂಬಂಧ ಇತ್ಯಾದಿ ಹಿಂಸೆಯ ಸ್ವರೂಪವನ್ನು ವೈದೇಹಿ ತಮ್ಮ ಕಥೆಗಳಲ್ಲಿ ತಿಳಿಸಿದ್ದಾರೆ. ಅದರಲ್ಲೂ ಸಮಾಜದಲ್ಲಿ ಮೇಲ್ವರ್ಗ ಎನಿಸಿಕೊಂಡಿರುವ ಬ್ರಾಹ್ಮಣ ಸಮುದಾಯದ ಮಹಿಳೆಯರು ಅನುಭವಿಸುವ ಹಿಂಸೆಯನ್ನು ಲೇಖಕಿ ತಿಳಿಸುತ್ತಾರೆ. ಹೆಣ್ಣು ವಿವಿಧ ಹಂತಗಳಲ್ಲಿ ಹೆಣ್ಣುಮಗಳು, ಸೊಸೆ, ತಾಯಿ ಎಲ್ಲಾ ಸಂದರ್ಭದಲ್ಲಿಯೂ ಶೋಷಣೆಗೆ ಒಳಗಾಗುತ್ತಾಳೆ.

ವಾಸ್ತವತೆಯ ಪ್ರತಿಪಾದನೆ, ಸ್ವಪ್ರಜ್ಞೆ, ಸಮಾಜವಿಮರ್ಶೆ, ಪ್ರತಿಭಟನೆ, ವೈಚಾರಿಕಥೆ, ಅಂತರ್ಮುಖತೆ ಇತ್ಯಾದಿ ವೈದೇಹಿ ಕಥೆಗಳ ವೈಶಿಷ್ಟ್ಯವಾಗಿದೆ. ಪಿತೃರೂಪಿ ಲಿಂಗವ್ಯವಸ್ಥೆಯಲ್ಲಿ ಶೀಲ, ನೈತಿಕತೆ, ಲೈಂಗಿಕ ಹಕ್ಕು ಎನ್ನುವುದು ಹೆಣ್ಣಿಗಷ್ಟೆ ಸಂಬಂಧಿಸಿದ ಪರಿಕಲ್ಪನೆಯಾಗಿದೆ. ಇಂತಹ ಏಕಮುಖ ನಿಲುವನ್ನು ಲೇಖಕಿ ಪ್ರಶ್ನಿಸುತ್ತಾರೆ. ಹೆಣ್ಣಿನ ಇಡಿಯ ವ್ಯಕ್ತಿತ್ವವನ್ನು ಶೀಲದೊಂದಿಗೆ, ಲೈಂಗಿಕತೆಯೊಂದಿಗೆ ಸಮೀಕರಿಸುತ್ತಾರೆ. ಇದನ್ನ ಲೇಖಕಿ ವಿರೋಧಿಸುತ್ತಾರೆ. ಕೌಟುಂಬಿಕ ಕೆಲಸ ಮತ್ತು ಜವಾಬ್ದಾರಿಗಳು ಗಂಡು ಹೆಣ್ಣಿಗೆ ಸಮಾನವಾಗಿ ಹಂಚಿಕೆಯಾಗಬೇಕು ಎನ್ನುವ 'ಹಕ್ಕೊತ್ತಾಯ 'ಓ ಜಗತ್ತೆ', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕಥೆಯಲ್ಲಿ ಕಂಡು ಬರುತ್ತದೆ. ಲಿಂಗತಾರತಮ್ಯವಿಲ್ಲದೆ ಯಾರು ಯಾವ ಬಗೆಯ ಕೆಲಸವನ್ನಾದರೂ ಮಾಡಬಹುದು ಎಂಬ

ನಿಲುವಿನೊಂದಿಗೆ ಹೆಣ್ಣು ಸಮಾನ ಜವಾಬ್ದಾರಿ ಹೊಂದುವ ಸಂದರ್ಭಗಳನ್ನು ಕಟ್ಟುವ ಕಡೆಗೆ ಲೇಖಕಿ ಆಸಕ್ತರಾಗಿದ್ದಾರೆ.

'ಅಮ್ಮಚ್ಚಿಯೆಂಬ ನೆನಪು' ಕಥೆಯಲ್ಲಿ ತಂದೆಯಿಲ್ಲದ ಹುಡುಗಿ ಪುರುಷನೊಬ್ಬನಿಂದ ನಿರಂತರವಾಗಿ ಶೋಷಣೆಗೆ ಒಳಗಾಗುವ ಕಥೆ ಇದೆ. ಅಮ್ಮಚ್ಚಿಯ ತಂದೆ ತೀರಿ ಹೋದಾಗ ಆಕೆಗಿನ್ನು ಆರು ತಿಂಗಳಂತೆ. ಸೀತತ್ತೆ ಮನೆಯಲ್ಲಿ 'ಗಂಡು ಬಲ' ಇಲ್ಲವೆಂದು ಅದೂ ಇದು ತರಲೆಂದು ವೆಂಕಪ್ಪನನ್ನು ಮನೆಯಲ್ಲಿಟ್ಟುಕೊಂಡಳು. ಆಗ ವೆಂಕಪ್ಪನಿಗೆ 12 ವರ್ಷ, ಹೀಗೆ ಮನೆ ಸೇರಿಕೊಂಡ ಆತ ಇದು ತನ್ನ ಮನೆಯೇ ಎಂಬಂತೆ ಇದ್ದುಬಿಟ್ಟ. ಅಮ್ಮಚ್ಚಿಯ ಮೇಲೂ ಹಕ್ಕು ಚಲಾಯಿಸಲಾರಂಭಿಸಿದನು. ಒಮ್ಮೆ ಅಮ್ಮಚ್ಚಿ ಶಂಭಟ್ಟರ ಮನೆಯ ಸತ್ಯನಾರಾಯಣ ಪೂಜೆಗೆಂದು ವಾರೆ ಬೈತಲೆ ತೆಗೆದು ಎರಡು ಜಡೆಕಟ್ಟಿಕೊಂಡು ಹೊರಟಳು. ವೆಂಕಪ್ಪಯ್ಯ ದಾರಿಯಲ್ಲಿ ಸಿಕ್ಕಿದ. ವೆಂಕಪ್ಪಯ್ಯ ಅಮ್ಮಚ್ಚಿಯನ್ನು ನೋಡಿ 'ಏನಿಯ? ಇದೇನಿಯ ಯೇಸ. ಬೊಂಬಾಯಿ ಲೇಡಿಯ ಹಂಗೆ ವಾರೆ ಬೈತಲೆ ಶಿ... ಶಿ... ನಡೆ ಮನೆಗೆ ಸರಿಯಾಯಿ ಬಾಚಿಂಡು ಹೋವು' ಎಂದೆನ್ನುತ್ತಾನೆ. ಇಲ್ಲಿ ವೆಂಕಪ್ಪಯ್ಯನ ದೃಷ್ಟಿಯಲ್ಲಿ ವಾರೆ ಬೈತಲೆ ತೆಗೆಯುವುದು ಎರಡು ಜಡೆ ಹಾಕುವುದು ಅಪರಾಧವೆಂಬಂತೆ ಮಾತನಾಡುತ್ತಾನೆ. ಇದು ಪುರುಷ ದೌರ್ಜನ್ಯದ ಸಂಕೇತ. ಅಮ್ಮಚ್ಚಿಯ ಮನೆಯಲ್ಲಿಯೇ ಬೆಳೆದ ವೆಂಕಪ್ಪ ಎಲ್ಲಾ ಆಸ್ತಿ ಪಾಸ್ತಿಗೂ ತಾನೇ ಹಕ್ಕುದಾರನೆಂಬಂತಾದ. ವೆಂಕಪ್ಪಯ್ಯ ಸೀತತ್ತೆಯ ಹತ್ತಿರ "ಅವಳನ್ನು ಮದುವೆ ಯಾಪುಗೆ ಇನ್ನು ಯಾವ ಪುಣ್ಯಾತ್ಮ ಬಪ್ಪ? ಮಗಳ ಚಿಂತೆ ನೀವು ಮಾಡಳೆ, ನಾನಿದ್ದೆ' ಎನ್ನುತ್ತಿದ್ದ. ಊರ ತುಂಬವು ಹೀಗೆ ಹೇಳುತ್ತಿದ್ದ. ಅಮ್ಮಚ್ಚಿಯ ಆಸೆ-ಆಕಾಂಕ್ಷೆಗಳನ್ನು ಅರಿಯದ ಈತ ತನಗೆ ಸರಿಯೆನಿಸಿದ್ದನ್ನು ಹೇಳುತ್ತ ಆಕೆಯನ್ನ ಶೋಷಣೆ ಮಾಡುತ್ತಿದ್ದ. ಒಂದು ದಿನ ಅಮ್ಮಚ್ಚಿ ಪೇಟೆಗೆ ಮತ್ತು ದೇವಸ್ಥಾನಕ್ಕೆಂದು ಹೊರಡುತ್ತಾಳೆ. ವೆಂಕಪ್ಪಯ್ಯ ದಾರಿಯಲ್ಲಿ ಅಡ್ಡ ನಿಂತು 'ಏನು ಯೇಸ ತಕಂಡು ಹೋತ ಪೇಟೆಯವ್ವ ಹಂಗೆ! ಶ್ಯೇಕ್ss... ಎದೆ ಎರಡೂ ಕಾಣ್ತಹಂಗೆ ಪಟ್ಟೆ ಸೆರಗು ಹಾಸಿಂಡು ಹೊರಟೆಯಲ್ಲ! ಯಾರ ಮರ್ಯಾದೆ ತೆಗೆಗೆ?' ಎಂದೆನ್ನುತ್ತಾನೆ. ವೆಂಕಪ್ಪಯ್ಯನ ದೃಷ್ಟಿಯಲ್ಲಿ ಅಮ್ಮಚ್ಚಿ ಸುಂದರವಾಗಿ ಕಾಣುವ ಹಾಗೆ ಉಡುಗೆ ತೊಟ್ಟರು ಕೂಡ ತಪ್ಪು. ಹಳ್ಳಿಯ ಹೆಣ್ಣುಮಗಳು ಸಮಾಜದ ಯಾವುದೇ ಬದಲಾವಣೆಗೆ ಸ್ಪಂದಿಸದೆ ಮೊದಲಿನಂತೆಯೆ ಇರಬೇಕೆಂಬ ಒತ್ತಡ ವೆಂಕಪ್ಪಯ್ಯನ ಕಡೆಯಿಂದ ಇದೆ. ಅಮ್ಮಚ್ಚಿ ರಮಾಟೀಚರ್‌ಗಲ್ಲಿ ಹಿಂದು ಗುಬ್ಬಿಯ ರವಕೆ ಹೊಲಿದು ಕೊಡಬೇಕೆನ್ನುತ್ತಾಳೆ, ರಮಾಟೀಚರ್ ಬ್ಲೌಸ್ ಹೊಲಿದುಕೊಡಬಹುದು ಆದರೆ ವೆಂಕಪ್ಪಯ್ಯ ಬಂದು ಗಲಾಟೆ ಮಾಡಿದರೆ ಎನ್ನುತ್ತಾಳೆ. ಹೀಗೆ ವೆಂಕಪ್ಪಯ್ಯ ಅಮ್ಮಚ್ಚಿಯ ಉಡುಗೆ-ತೊಡುಗೆಯ ಮೇಲೂ ನಿರ್ಬಂದ ವಿಧಿಸಿರುವುದನ್ನು ಕಾಣಬಹುದು.

ವೆಂಕಪ್ಪಯ್ಯ ತಿರುಪತಿಗೆಂದು ಹೊರಟುಹೋದನು. ವೆಂಕಪ್ಪಯ್ಯನಿಲ್ಲದ ಸಮಯದಲ್ಲಿ ಅಮ್ಮಚ್ಚಿ ಅವನ ಶರ್ಟನ್ನು ಕೊಯ್ದು ಮುಂಬಾಗದ ಗುಂಡಿಗಳನ್ನು ಹಿಂಬಾಗಕ್ಕೆ ಇಟ್ಟಳು. ತಿರುಪತಿಯಿಂದ ವಾಪಾಸು ಬಂದು ತನ್ನ ಶರ್ಟನ್ನು ನೋಡಿ ಕೋಪಗೊಂಡನು. ಅಮ್ಮಚ್ಚಿಯ ಜಡೆಬುಡಕ್ಕೆ ಕೈಹಾಕಿ ದರದರನೆ ಎಳೆಯುತ್ತ ಸೀದ ಕೋಣೆಗೆ ಹೋಗಿ ಬಾಗಿಲುಹಾಕಿಕೊಂಡ. ಸೀತತ್ತೆ ಎಷ್ಟು ಕೂಗಿದರು ಬಾಗಿಲು ತೆಗೆಯಲಿಲ್ಲ. ಸ್ವಲ್ಪ ಸಮಯದ ನಂತರ ಬಾಗಿಲು ತೆರೆಯಿತು. ಅಮ್ಮಚ್ಚಿ ಹೊರಬಂದಳು ಮುಖಧಗಧಗಿಸುತ್ತಿತ್ತು. ತುಟಿ ಒಡೆದು ರಕ್ತ ಒಸರುತ್ತಿತ್ತು. ಅಮ್ಮಚ್ಚಿಯ ಮೇಲೆ ಅತ್ಯಾಚಾರ ನಡೆದುಹೋಗಿತ್ತು. ಅವರಿಬ್ಬರಿಗೂ ಮದುವೆಯಾಯಿತು. ವೆಂಕಪ್ಪಯ್ಯ ತಿರುಪತಿಯಲ್ಲಿ ಹೋಟೆಲ್ ಇಟ್ಟು ಅಮ್ಮಚ್ಚಿಯನ್ನು ಕರೆದುಕೊಂಡು ಹೋದ. ಬಹಳಸಮಯದ ನಂತರ ಅಮ್ಮಚ್ಚಿ ಒಬ್ಬಳೇ ಮನೆಗೆಬರುತ್ತಾಳೆ. ಅಸಂತೃಪ್ತಿಯ ಅವರ ದಾಂಪತ್ಯ ಜೀವನಕೊನೆಗೊಂಡಿತ್ತು.

ಅಸಹಾಯಕಳಾದ ಅಮ್ಮಚ್ಚಿ ವೆಂಕಪ್ಪಯ್ಯನಿಂದ ನಿರಂತರ ಶೋಷಣೆಗೆ ಒಳಗಾಗಿ. ತನ್ನೆಲ್ಲಾ ಆಸೆ–ಆಕಾಂಕ್ಷೆಗಳನ್ನೆಲ್ಲಾ ಮಣ್ಣುಗೂಡಿಸಿಕೊಂಡು ಆತನೊಂದಿಗೆ ಒತ್ತಾಯಪೂರ್ವಕವಾಗಿ ಮದುವೆಯಾಗಿ ತನ್ನ ಬದುಕನ್ನು ದುರಂತವಾಗಿಸಿಕೊಳ್ಳುತ್ತಾಳೆ.

'ಕ್ರೌಂಚ ಪಕ್ಷಿಗಳು' ಕಥೆಯಲ್ಲಿ ಲೈಂಗಿಕ ಕಟ್ಟುಪಾಡುಗಳು ಕೇವಲ ಮಹಿಳೆಗೆ ಮಾತ್ರ ಮೀಸಲು ಎಂಬಂತೆ ಸಮಾಜ ಬಾವಿಸುವ ಪರಿಯನ್ನು ತಿಳಿಸಿದ್ದಾರೆ. ವಿಶಾಕಬೆನ್, ಲಕ್ಷ್ಮಮ್ಮ, ಅಶ್ನಾರ್ಣಭಟ್ಟರು ಹಾಗೂ ಅನ್ನಪೂರ್ಣ ಈ ಕಥೆಯಲ್ಲಿ ಬರುವ ಪ್ರಮುಖ ಪಾತ್ರಗಳು. ಅಶ್ನಾರ್ಣಭಟ್ಟರು ಅಡಿಗೆ ವೃತ್ತಿಯನ್ನು ಕಲಿತು ದೆಹಲಿಯಲ್ಲಿ ನೆಲೆಸಿದರು. ಒಮ್ಮೆ ಊರಿಗೆಬಂದವರು ಲಕ್ಷ್ಮಮ್ಮನನ್ನು ಮದುವೆಯಾಗಿ ದೆಹಲಿಗೆ ಕರೆದುಕೊಂಡು ಹೋದರು. ಅದು ದೇಶವಿಭಜನೆಯ ಸಂದರ್ಭ, ಕೋಮುದಳ್ಳುರಿಯಿಂದ ಇಡೀ ಉತ್ತರಭಾರತ ನಡುಗುತ್ತಿತ್ತು. ಲಕ್ಷ್ಮಮ್ಮ ಹೋಟೇಲಿನಲ್ಲಿ ಕೆಲಸ ಮಾಡುತ್ತಿದ್ದಾಗ ಒಂದು ಹಿಂಡು ಜನ ಒಳಗೆ ಬಂದು ಆಶ್ನಾರ್ಣಭಟ್ಟರ ಎದುರೇ ಆಕೆಯನ್ನು ಎತ್ತಿಕೊಂದು ಹೋದರು. ಆ ಸಮಯದಲ್ಲಿ ಪರ ಸ್ತ್ರೀಯರ ಮೇಲೆ ಅತ್ಯಾಚಾರ ಯಾವುದೇ ಅಡೆತಡೆಯಿಲ್ಲದೆ ನಡೆಯುತ್ತಿತ್ತು. ಅಪಹರಣಕ್ಕೊಳಗಾದ ಮಹಿಳೆಯರನ್ನು ಗುರುತಿಸಿ ಕರೆತರಲಾಯಿತು. ಹೀಗೆ ಕರೆತಂದವರನ್ನು ಅವರ ಮನೆಯವರು ಬಂದು ಕರೆದುಕೊಂಡು ಹೋಗುವುದಕ್ಕೆ ವ್ಯವಸ್ಥೆ ಮಾಡಲಾಗಿತ್ತು. ಈಕೆಯನ್ನು ಆಶ್ನಾರ್ಣಭಟ್ಟರು ನೋಡಿದರೂ ಕೂಡ ಪರಿಚಯವೇ ಇಲ್ಲದಂತೆ ಹೋದರು ನಂತರ ಅನ್ನಪೂರ್ಣಮ್ಮನೊಂದಿಗೆ ಮದುವೆಯಾಗಿ ನಾಲ್ಕು ಮಕ್ಕಳನ್ನು ಪಡೆದರು. ಇಲ್ಲಿ ಲಕ್ಷ್ಮಮ್ಮ ಅಪಹರಣಕ್ಕೊಳಗಾಗಿದ್ದೇ ಕಾರಣವಾಗಿ ಅಶ್ನಾರ್ಣಭಟ್ಟರು ಆಕೆಯ ಶೀಲವನ್ನು ಶಂಕಿಸಿ ಮನೆಗೆ ಕರೆದುಕೊಂಡು ಬರುವುದಿಲ್ಲ. ದೇಶವಿಭಜನೆಯ ಸಂದರ್ಭದಲ್ಲಿ ಆಕಸ್ಮಿಕವಾಗಿ

ಅನಾಮಿಕರಿಂದ ದೌರ್ಜನ್ಯಕ್ಕೊಳಗಾದ ಈಕೆ ತನ್ನ ಗಂಡನನ್ನು, ಮನೆಯವರನ್ನು ಕಳೆದುಕೊಂಡು ಪುರರ್ವಸತಿ ಕೇಂದ್ರದಲ್ಲಿ ಜೀವನಸಾಗಿಸುವಂತಾಯಿತು. ಅಶ್ನಾರ್ಣಭಟ್ಟರು ಕೇವಲ ಒಂದೇ ವರ್ಷ ಎಲ್ಲೋ ಇದ್ದ ಹೆಂಡತಿಯನ್ನು ಪುನಃ ಮನೆಗೆ ಸೇರಿಸಿಕೊಳ್ಳದೆ ಆಕೆಯ ಜೀವನವನ್ನು ದುರಂತವನ್ನಾಗಿಸಿದರು. ಇದು ಒಂದು ಹೆಣ್ಣಿನ ಬಗ್ಗೆ ಪುರುಷ ಬಯಸುವ ಲೈಗಿಂಕಾ ಪಾವಿತ್ರ್ಯ ಅದೇ ಒಬ್ಬ ಗಂಡು ಆಯುಷ್ಯವೆಲ್ಲ ಎಲ್ಲೆಲ್ಲೊ ಕಳೆದು ಖಾಯಿಲೆ ಹತ್ತಿಸಿಕೊಂಡು ಬರುವ 'ಯಜಮಾನರ' ಜೊತೆ ಸಂಸಾರ ನಡೆಸುವ ಹೆಣ್ಣು ಬಹಳಿಷ್ಟಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರ ಮೇಲೆ ಲೈಂಗಿಕ ಕಟ್ಟುಪಾಡುಗಳನ್ನು ವಿಧಿಸುವ ಇವರು ತಮ್ಮ ಮೇಲೆ ಏಕೆ ವಿಧಿಸಿಕೊಂಡಿಲ್ಲ ಎಂಬುದು ಲೇಖಕಿಯ ಪ್ರಶ್ನೆಯಾಗಿದೆ.

'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕಥೆಯಲ್ಲಿ ಲಿಂಗತಾರತಮ್ಯದ ಪ್ರಸ್ಥಾಪವಿದೆ. ಒಂದು ಚಿಕ್ಕ ಊರು. ಆ ಉರಿನಲ್ಲಿ ಒಂದು ಬಯಲಿತ್ತು. ಸಂಜೆಹೊತ್ತು ಗಂಡಸರು ವಾಕಿಂಗ್ ಹೋಗಿ ಕುಳಿತುಕೊಳ್ಳೂವ ಜಾಗವಾಗಿತ್ತು. ಅಲ್ಲಿ ಕುಳಿತು ಇಡೀ ಊರಿನ ವಿಚಾರವನ್ನು ಅವರು ಮಾತನಾಡುತ್ತಿದ್ದರು. ಆದರೆ ಬಯಲಿಗೆ ಹೆಂಗಸರು ಹೋಗುವ ಕಟ್ಟಳೆ ಇರಲಿಲ್ಲ. ಹೆಂಗಸರು ಬಯಲಿಗೆ ಹೋಗುವುದಿರಲಿ ತಾವಾಗಿ ರಸ್ತೆಗೆ ಇಳಿಮುತ್ತಿರಲಿಲ್ಲ. ತಾವಾಯಿತು ತಮ್ಮ ಮನೆಯಾಯಿತು ಎಂದಿರುತ್ತಿದ್ದರು. ಗಂಡಸರಿಗೆ ಇಷ್ಟೊಂದು ಅಧೀನರಾಗಿದ್ದರು. ಹೆಂಗಸರ ಕೆಲಸವೆಂದರೆ ಮಕ್ಕಳನ್ನು ಪೋಷಿಸುವುದು. ಸಂಜೆಯ ಹೊತ್ತು ಅವರನ್ನು ಆಟಕ್ಕೆ ಕಳುಹಿಸಿ ತಾವು ಅಲಂಕರಿಸಿಕೊಂಡು ನಾಳೆಯ ಕುಡುಬಿಗೆ ಕೊಟ್ಟಿಸೆಡುತ್ತಲೋ, ಅಕ್ಕಿ–ಉದ್ದು ಅರೆಯುತ್ತಲೋ ಹೂ ಕಟ್ಟುತ್ತಲೋ ಇರುತ್ತಿದ್ದರು. ಸಂಜೆ ಸೂರ್ಯಮುಳುಗಿದೊಡನೆ ದೇವರಿಗೆ ದೀಪಹಚ್ಚಿ ತಾಳಹಾಕುತ್ತಾ, ಭಜನೆಮಾಡುತ್ತಾ, ಕಾಲಕಳೆಯುತ್ತಿದ್ದರು. ಹೆಂಗಸರೆಂದರೆ ಅವರ ಕೆಲಸ ಇಷ್ಟಕ್ಕೆ ಮಾತ್ರ ಸೀಮಿತ ಎಂಬ ಭಾವನೆ ಇತ್ತು. ಅವರಿಗೆ ಯಾವುದೇ ಲೋಕ ವ್ಯವಹಾರದ ಜ್ಞಾನವಿರಲಿಲ್ಲ. ಎಲ್ಲಾ ಹೊರಗಿನ ಕೆಲಸ ಗಂಡಸರದ್ದು ಎಂಬ ಮನೋಭಾವವಿದ್ದಿತ್ತು. ಪುರುಷಲೋಕ ಮತ್ತು ಸ್ತ್ರೀಲೋಕ ಈ ರೀತಿ ಇದ್ದಂತಹ ಆ ಊರಿನಲ್ಲಿ ಹಿಂದೆ ಎಲ್ಲೋ ಒಮ್ಮೆ ಒಂದು ಸರ್ಕಸ್ಸು ಬಂದಿತ್ತು ಎಂದು ಹೇಳುವವರಿದ್ದಾರೆ. ಒಂದು ನಾಟಕ ಕಂಪೆನಿಯು ಬಂದಿತ್ತೆನ್ನುತ್ತಾರೆ. ಅದನ್ನೆಲ್ಲಾ ಎಷ್ಟು ಜನ ಹೆಂಗಸರು ನೋಡಿದ್ದಾರೆ ಅಂತ ಮಾತ್ರ ಹೇಳುವವರಿಲ್ಲ. ನಾಟಕವನ್ನಾದರು ಹೆಂಗಸರು ನೋಡಿರಬಹುದು. ಆದರೆ ಸರ್ಕಸ್ಸು ಹೆಂಗಸರೆಲ್ಲಾ ನೋಡುವಂತದ್ದಲ್ಲ ಎಂದು ಗಂಡಸರು ಹೆಂಗಸರಿಗೆ ನಿಷೇಧ ಹೇರಿದ್ದರು.

ಆ ಊರಿನಲ್ಲಿ ಆರು ತಿಂಗಳಿಗೊಮ್ಮೆ ಒಂದು ಟೆಂಟು ಠಿಕಾಣಿ ಹೂಡುತ್ತಿತ್ತು. ಇದು ಹೆಂಗಸರ ಸ್ಥಿತಿ ಸ್ವಲ್ಪ ಸುದಾರಿಸಿದಂತೆ ಕಂಡರು ಅದು ಹೇಳಿಕೊಳ್ಳುವಂತದ್ದೇನಾಗಿರಲಿಲ್ಲ. ಟೆಂಟಿಗೆ ಬಂದಂತಹ

ಸಿನಿಮಾಗಳನ್ನು ನೋಡಲು ಅವರು ಗಂಡಸರನ್ನೇ ಅವಲಂಬಿಸಬೇಕಿತ್ತು. ಗಂಡಸರು ಎಲ್ಲಾದರೂ ಮನಸ್ಸಾದರೆ ಅವರನ್ನ ಸಿನಿಮಾಕ್ಕೆ ಕರೆದೊಯ್ಯುತ್ತಿದ್ದರು. ಹೆಂಗಸರು ತಾವಾಗಿಯೇ ಸಿನಿಮಾಕ್ಕೆ ಹೋಗುತ್ತಿರಲಿಲ್ಲ. ಅಲ್ಲದೇ ರಸ್ತೆಗೂ ಇಳಿಯುತ್ತಿರಲಿಲ್ಲ. ಗಂಡಸರು ಅವರನ್ನು ಕರೆದುಕೊಂಡು ಹೋಗಿ ಟಿಕೇಟ್ ತೆಗೆಸಿಕೊಟ್ಟು. ಹೆಂಗಸರ ಗೇಟಿನ ಬಳಿ ಆ ಟಿಕೇಟ್‌ಗಳನ್ನು ಹರಿಸಿ ಅವರನ್ನು ಒಂದು ಕಡೆ ಕೂರಿಸಿ ಸಿನಿಮಾ ಮುಗಿದ ಮೇಲೆ ವಾಪಾಸು ಕರೆದುಕೊಂಡು ಬರುತ್ತಿದ್ದರು.

ಹೆಂಗಸರು ಮತ್ತು ಗಂಡಸರ ನಡುವೆ ಕೆಲಸಗಳು ವಿಭಜನೆ ಹೊಂದಿರುವುದನ್ನು ಕಾಣಬಹುದಾಗಿದೆ. ಹೆಂಗಸರು ತಾವಾಗಿ ಏನನ್ನು ಮಾಡಲು ಸ್ವತಂತ್ರರಲ್ಲ. ಒಂದು ಸಿನಿಮಾ ನಾಟಕ ನೋಡುವುದಕ್ಕೂ, ರಸ್ತೆಯಲ್ಲಿ ನಡೆದಾಡಲು ಪುರುಷರನ್ನ ಅವಲಂಬಿಸ ಬೇಕಾಗಿತ್ತು. ಪುರುಷ ಪ್ರಧಾನ ಸಮಾಜ ತಮ್ಮ ಅನುಕೂಲಕ್ಕೆ ತಕ್ಕಂತೆ ಸಮಾಜದಲ್ಲಿ ನೀತಿನಿಯಮಗಳನ್ನು ರೂಪಿಸಿಕೊಂಡಿದೆ.

'ಅವಲಂಬಿತರು' ಕಥೆಯಲ್ಲಿ ವಯಸ್ಸಿಗೆ ಬಂದಂತಹ ಹೆಣ್ಣುಮಕ್ಕಳನ್ನು ಮನೆಯಲ್ಲಿ ಇಟ್ಟುಕೊಳ್ಳುವುದೇ ತಪ್ಪು ಎಂದು ಭಾವಿಸುವ ಸಮಾಜದ ಮನೋಸ್ಥಿತಿ ವ್ಯಕ್ತವಾಗಿದೆ. ಸೂಚಮ್ಮನ ಮಗಳು ಅಹಲ್ಯ. ಇವರು ತೀರಾ ಬಡವರು. ಮಗಳನ್ನು ದುಡಿಯಲೆಂದು ಶಾರದೆಯ ಮನೆಗೆ ಕಳುಹಿಸುತ್ತಾಳೆ. ಅಹಲ್ಯೆ ಮೈನೆರೆಯದ ಕಾರಣ ಈಕೆಯನ್ನ ಮಗುವಾಡಿಸಲು ಹಾಗೂ ಮನೆಕೆಲಸಕ್ಕೆಂದು ಇಟ್ಟುಕೊಳ್ಳುತ್ತಾಳೆ. ಒಟ್ಟಿನಲ್ಲಿ ಅಹಲ್ಯ ಇವರ ಮನೆಗೆ ಬರಲು ಕಾರಣವಾದದ್ದು ಒಂದು ಬಡತನದಾದರೆ ಮತ್ತೊಂದು ಆಕೆ ಇನ್ನು ಮೈ ನೆರೆಯದೆ ಇದ್ದದ್ದು. ಶಾರದೆ ಅಹಲ್ಯಳನ್ನು ಕುರಿತು "ಮೈನೆರೆದ ಮೇಲೆ ಇಟ್ಟುಕೊಳ್ಳುವುದಿಲ್ಲಪ್ಪ. ನಂಗೆ ಒಂಥರ ಭಯ, ಯಾರನ್ನಂತ ಕಾಯುವುದು? ಯಾರನ್ನು ನಂಬುವಂತಿಲ್ಲ ಅಲ್ಲವೆ?" ಎಂದು ತನ್ನ ಸ್ನೇಹಿತೆಯಾದ ಸುಶೀಲನಿಗೆ ಹೇಳುತ್ತಾಳೆ. ಹೆಣ್ಣು ದೊಡ್ಡವಳಾಗುವುದೇ ಅಪರಾಧವೆಂಬಂತೆ ಶಾರದೆ ಮಾತನಾಡುತ್ತಾಳೆ. ಗಂಡಸು ಎಲ್ಲಿ ಬೇಕಾದರು ಹೇಗೆ ಬೇಕಾದರು ಇರಬಹುದು ಆದರೆ ಹೆಣ್ಣು ದೊಡ್ಡವಳಾದ ಮೇಲೆ ಆಕೆಯ ಮೇಲೆ ಇಲ್ಲಸಲ್ಲದ ಕಟ್ಟುಪಾಡುಗಳನ್ನು ಹೇರಿ ಅವರ ಸ್ವಾತಂತ್ರವನ್ನು ಕಸಿದುಕೊಳ್ಳುವ ಪ್ರಯತ್ನ ನಾಗರೀಕ ಸಮಾಜದಿಂದ ನಡೆಯುತ್ತಿದೆ.

'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ ಎಂಬ ಕಥೆಯಲ್ಲಿ ವಿಧವೆಯರ ಸ್ಥಿತಿಗತಿಯನ್ನು ತಿಳಿಸಲಾಗಿದೆ. ವಾಗತ್ತೆ ತನ್ನ ಮೊಮ್ಮಗಳ ಮದುವೆಯಲ್ಲಿ ಬಂದವರನ್ನೆಲ್ಲ ಬಹಳ ಆದರದಿಂದ ಸ್ವಾಗತಿಸುತ್ತಾರೆ. ವಾಗತ್ತೆ ಗಂಡನನ್ನು ಕಳೆದುಕೊಂಡಿದ್ದಾಳೆ. ವಾಗತ್ತೆಯ ಹಾಗೆ ಮುತ್ತತ್ತೆ. ಕಾಟಜ್ಜಿ, ಹೆಬ್ಬಾಗಿಲಜ್ಜಿ, ಸರಸಜ್ಜಿ

ಗಂಡಂದಿರನ್ನು ಕಳೆದುಕೊಂಡು ವಿಧವೆಯರಾಗಿದ್ದಾರೆ. ಇವರೆಲ್ಲರು ಹಣೆಗೆ ಬೊಟ್ಟಿಡುವಂತಿಲ್ಲ, ಕರಿಮಣಿಯ ಸರವನ್ನು ಹಾಕುವಂತಿಲ್ಲ, ಬೋಳುತಲೆ ಮಾಡಿಕೊಂಡು ಕೆಂಪು ಸೀರೆಯುಟ್ಟು ಸೆರಗನ್ನು ತಲೆಯಮೇಲೆ ಹಾಕಿಕೊಳ್ಳಬೇಕು. ಯಾವುದೇ ಶುಭಕಾರ್ಯಕ್ಕೆ ರಂಗೋಲಿ ಹಾಕುವಂತಿಲ್ಲ. ಮದುವೆ ಮಂಟಪದ ಬಳಿ ಸುಳಿಯಲೂ ಕೂಡ ಇವರಿಗೆ ಅವಕಾಶವಿರಲಿಲ್ಲ. ಯಾವುದಾದರೂ ಮೂಲೆಯಲ್ಲಿ ಕುಳಿತು ಮದುವೆ ಕಾರ್ಯವನ್ನು ನೋಡುವಂತಹ ಪರಿಸ್ಥಿತಿ ವಿಧವೆಯರದಾಗಿದ್ದಿತ್ತು. ಹೆಬ್ಬಾಗಿಲಜ್ಜ ಹದಿನಾಲ್ಕೇ ವರ್ಷಕ್ಕೆ ವಿಧವೆಯಾದಳು. ಇದೆಲ್ಲ ನಾವು ಪಡೆದುಕೊಂಡು ಬಂದದ್ದು ಅನುಭವಿಸಬೇಕು ಎನ್ನುತ್ತಾಳೆ. ಗಂಡಸತ್ತನೆಂದರೆ ತಲೆಬೋಳಿಸಿಕೊಳ್ಳಬೇಕು, ಮಜ್ಜಿಗೆ ತುಪ್ಪವನ್ನು ಬಿಡಬೇಕು, ತನ್ನ ಎಲ್ಲಾ ಸ್ತ್ರೀಸಹಜ ಆಸೆ ಆಕಾಂಕ್ಷೆಗಳನ್ನೆಲ್ಲಾ ಬಲಿಕೊಟ್ಟು ಸಾಯುವವರೆಗೂ ಆಕೆ ಧರ್ಮವನ್ನು ಅನುಸರಿಸಬೇಕು ಎಂಬಂತಹ ನಿಯಮ ಸಮಾಜದಲ್ಲಿದ್ದಿತು. ಗಂಡಸರು ತನ್ನ ಹೆಂಡತಿಯನ್ನ ಕಳೆದುಕೊಂಡರೆ ಬೇರೊಂದು ಹೆಣ್ಣನ್ನು ಮದುವೆಯಾಗಿ ಸಮಾಜದಲ್ಲಿನ ಎಲ್ಲಾ ಸುಖಭೋಗಗಳನ್ನು ಅನುಭವಿಸಬಹುದು. ಆದರೆ ಹೆಣ್ಣಿನ ಮೇಲೆ ಇಲ್ಲಸಲ್ಲದ ಕಟ್ಟುಪಾಡುಗಳನ್ನು ಹೇರಿ ಅವಳನ್ನು ಸಮಾಜದ ಎಲ್ಲಾ ಸುಖಭೋಗಗಳಿಗೆ ಅನರ್ಹಳಾಗಿ ಮಾಡಲಾಗಿದೆ.

'ಒಂದು ಬಾಗಿಲ ಸದ್ದು' ಕಥೆಯಲ್ಲಿ ದೇವರ ಪೂಜೆಯಲ್ಲಿಯು ಲಿಂಗತಾರತಮ್ಯ ಮಾಡುವುದನ್ನು ಕಾಣಬಹುದು. ಸಾಲಿಗ್ರಾಮ ಶಿಲೆ ಪವಿತ್ರವಾದದ್ದು ಎಂಬುದು ಜನರ ನಂಬಿಕೆ. ಸಾಲಿಗ್ರಾಮ ಶಿಲೆಯನ್ನು ಒಂದು ಸಣ್ಣ ಪೆಟ್ಟಿಗೆಯಲ್ಲಿಟ್ಟು ದೇವರ ಗೂಡಿನಲ್ಲಿಟ್ಟಿರುತ್ತಾರೆ. ಪ್ರತಿದಿನ ವಿಶೇಷ ಮಡಿಯಲ್ಲಿ ಪೂಜೆ, ಅಭಿಷೇಕ, ನೈವೇದ್ಯವಾಗಬೇಕು. ಅದರ ಅಭಿಶೇಕ ಪವಿತ್ರತೀರ್ಥವೆಂದು ಬಾವಿಸುತ್ತಾರೆ. ಆದರೆ ಸಾಲಿಗ್ರಾಮ ಶಿಲೆಯನ್ನು ಸ್ತ್ರೀ, ಶೂದ್ರ, ಪತಿತ, ಷಂಡ ಮುಟ್ಟಲು ಅನರ್ಹರು. ಸಾಲಿಗ್ರಾಮ ಶಿಲೆಯನ್ನು ಕುರಿತಂತೆ 'ಸ್ತ್ರೀಣಾಂ ನೈವಾಧಿಕಾರೋ ವಿಜ್ಞೇಯಃ ಸಾಲಿಗ್ರಾಮ ಶಿಲಾರ್ಚನೇ...' ಎಂಬ ಮಾತಿದ್ದಿತು. ಇದು ಸಾಲದೆಂಬಂತೆ ಮುಟ್ಟಿನವರು, ಮದುವೆಯಾದವರು?... ಸಾಲಿಗ್ರಾಮ ಶಿಲೆಯನ್ನು ಮುಟ್ಟಬಾರದೆಂದು ನಂಬಿಕೆ ಇದೆ, ಸ್ತ್ರೀಯರಿಗೆ ಅವರ ಸ್ತ್ರೀಯತ್ವವೇ ಕಾರಣವಾಗಿ ಸಾಲಿಗ್ರಾಮ ಶಿಲೆ ಪೂಜೆ ಮಾಡಲು ಅನರ್ಹರಾಗಿದ್ದಾರೆ. ಅಲ್ಲದೆ ಸ್ತ್ರೀಯರನ್ನ ಶೂದ್ರ, ಪತಿತ, ಷಂಡ ಈ ವರ್ಗಕ್ಕೆ ಸೇರಿಸಲಾಗಿದೆ. ಪುರುಷ ಪ್ರಧಾನ ಸಮಾಜ ತಮಗೆ ಅನುಕೂಲವಾಗುವ ಹಾಗೆ ಕೆಲವು ಕಟ್ಟುಕಟ್ಟಳೆಗಳನ್ನು ನಿರ್ಮಿಸಿಕೊಂಡು ಸ್ತ್ರೀಯರನ್ನು ನಿಯಂತ್ರಿಸಲು, ತಮ್ಮ ಅಧೀನದಲ್ಲಿಟ್ಟುಕೊಳ್ಳಲು ಮುಂದಾಗಿವೆ ಎಂಬುದು ಲೇಖಕಿಯ ಅಭಿಪ್ರಾಯವಾಗಿದೆ.

'ಆಭಾ' ಕಥೆಯಲ್ಲಿ ಹೆಣ್ಣೊಬ್ಬಳಿಗೆ ತನಗೆ ಬೇಕಾದ ಹಾಗೆ ಮಲಗಲು, ಕೂರಲು, ಅಭ್ಯಾಸಗಳನ್ನು ಬೆಳೆಸಿಕೊಳ್ಳಲು ಸ್ವತಂತ್ರವಿಲ್ಲವೆಂಬುದು ತಿಳಿಯುತ್ತದೆ. ಸಮಿತಾ ಒಬ್ಬಳೇ ಮನೆಯಲ್ಲಿ ಇದ್ದಂತಹ

ಸಮಯದಲ್ಲಿ ಆಭಾ ಮನೆಗೆ ಬರುತ್ತಾಳೆ. ಆಭಾ ಸಮಿತಳಿಗೆ ಪರಿಚಯಸ್ಥಳಲ್ಲ, ಹೀಗೆ ಬಂದವಳು ಸಮಿತ ಕೇಳದೆ ಇದ್ದರು ತನ್ನೆಲ್ಲಾ ಸಮಾಚಾರ ಹೇಳುತ್ತಾಳೆ. ರಾತ್ರಿ ಅಲ್ಲಿಯೇ ಉಳಿಯುತ್ತಾಳೆ. ಬೆಳಿಗ್ಗೆ ಸೂರ್ಯ ಹುಟ್ಟುತ್ತಿರುವ ಸುಂದರ ಪ್ರಕೃತಿ ಸೊಬಗನ್ನು ಆಭಾಳಿಗೆ ತೋರಿಸೋಣವೆಂದು ಸಮಿತ ಅತ್ತ ಕಡೆ ನೋಡಿದರೆ ಆಕೆ ಹೊದಿಕೆಯಲ್ಲ ಅಸ್ತವ್ಯಸ್ತ ಮಾಡಿಕೊಂಡು ಕವುಚಿ ಮಲಗಿದ್ದಳು. ಸಮಿತ ಆಕೆಯನ್ನು ನೋಡಿ 'ಥೂ, ಇವಳಿಗೊಂದು ಮಲಗಲೂ ಯಾರೂ ಹೇಳಿಕೊಡಲಿಲ್ಲವೇ?... ಮಲಗಲೂ ಹೇಳಿಕೊಡುವುದು!' ಎಂದು ಹೇಳಿ ಆಕೆಯ ಕೂದಲನ್ನು ಸರಿಸಿ 'ಹೇ, ಸರಿ ಮಲಕೊ, ಒಳ್ಳೆ ಗಂಡಸರಂತೆ ಮಲಗಿದ್ದೀಯಲ್ಲ; ಎನ್ನುತ್ತಾಳೆ. ಕಣ್ಣು ತೆರೆಯದೇ ಆಭಾ ಹಾಗಾದರೆ ಗಂಡಸುತನ ಎಲ್ಲೆಲ್ಲ ಇರುತ್ತದಪ್ಪ!... ಮಲಗುವುದರಲ್ಲಿಯೂ ಇದೆ ಎಂದರೆ!... ಅಥವಾ ಇರುವುದು ಅಲ್ಲಿ ಮಾತ್ರವ?... ಎನ್ನುತ್ತಾಳೆ. ಹೀಗೆ ಸ್ತ್ರೀಯು ಮಲಗುವುದಕ್ಕು ಕೆಲವು ನೀತಿನಿಯಮಗಳನ್ನ ರೂಪಿಸಿ ಆಕೆಯನ್ನ ನಿರ್ಬಂಧಿಸಿರುವುದು ಕಾಣುತ್ತದೆ. ಉಡುಗೆಯ ವಿಚಾರದಲ್ಲೂ ಮಹಿಳೆಯ ಮೇಲೆ ಸಮಾಜ ನಿರ್ಬಂಧ ವಿಧಿಸಿದೆ. ಪ್ರಾರಂಭದಲ್ಲಿ ಬಿಗಿ ಉಡುಪಿನ ಬದಲಿಗೆ ನೈಟಿ ಬಂದಾಗ ಅದನ್ನು ತೊಡುವುದು ಒಂದು ಕ್ರಾಂತಿಯೇ ಆಗಿತ್ತೆಂದು ಆಭಾ ತಿಳಿಸುತ್ತಾಳೆ. ಗಂಡಸಾದವನು ಯಾವ ಬಗೆಯ ಉಡುಪನ್ನಾದರು ಧರಿಸಬಹುದು, ಹೇಗೆ ಬೇಕಾದರು ಮಲಗಬಹುದು ಆದರೆ ಆದೇ ಮಹಿಳೆಯರ ವಿಷಯಕ್ಕೆ ಬಂದರೆ ನಿಷಿದ್ಧ ಸಮಾಜದಲ್ಲಿ ಈ ಲಿಂಗತಾರತಮ್ಯವೇಕೆ ಎಂಬುದು ಲೇಖಕಿಯ ಪ್ರಶ್ನೆಯಾಗಿದೆ.

"ಸೌಗಂಧಿಯ ಸ್ವಗತಗಳು' ಕಥೆಯಲ್ಲಿ ಅತಿಯಾದ ಅಕ್ಕರೆಯ ಸೋಗಿನಲ್ಲಿ ಸಮಾಜ ಹೆಣ್ಣಿನ ಜೀವನದ ವಿವಿಧ ಹಂತಗಳಲ್ಲಿ ಅವಳ ಜೀವನದ ಸ್ವತಂತ್ರ ಕಸಿದುಕೊಳ್ಳುವ ಪ್ರಯತ್ನವನ್ನು ನೋಡಬಹುದು. ಸೌಗಂಧಿಯನ್ನು ಬಸ್ಸಿಗೆ ಹತ್ತಿಸಲು ಆಕೆಯ ತಂದೆ ಬಂದಿದ್ದರು. ಅವರು ಸೌಗಂಧಿಯ ಪಕ್ಕ ಹೆಂಗಸರನ್ನೇ ಕೂಡಿಸಿ ಉಪಕರವಾಗುತ್ತೆ ಎಂದು ಹೇಳಿದರು. ಇಂತಹ ಅತಿಯಾದ ಅಕ್ಕರೆ ಸೌಗಂಧಿಗೆ ಅಸಹ್ಯವೆನಿಸುತ್ತಿತ್ತು. ವರ್ಗವಾದ ಮೇಲೆ ಸೌಗಂಧಿ ಮತ್ತು ಆಕೆಯ ತಂದೆ ಬಾಡಿಗೆಗೆಂದು ಗೊತ್ತುಪಡಿಸಿದ ಮನೆಗೆ ಹೋದರು. ಅಲ್ಲಿ ಆ ಮನೆಯ ಒಡತಿ ವಿಧವೆ ಮನೆಯೊಡತಿಗೆ ತನ್ನ ಮಗಳ ವಿಚಾರವೆಲ್ಲಾ ಹೇಳಿ ಜಾಗೃತಿಯಿಂದ ನೋಡಿಕೊಳ್ಳುವಂತೆ ಹೇಳುತ್ತಾರೆ. ಮನೆಗೆ ಬಂದ ಸೌಗಂಧಿಯ ತಂದೆ ತನ್ನ ಹೆಂಡತಿಗೆ ಬಾಡಿಗೆ ಮನೆಯ ವಿಚಾರ ತಿಳಿಸುತ್ತಾರೆ. ಆ ಮನೆಯಲ್ಲಿ ಗಂಡಸರಿಲ್ಲದ್ದು ಒಳ್ಳೆಯ ಅಂಶವೇ ಎಂಬಂತೆ ಹೇಳುತ್ತಾರೆ. ಅಪ್ಪನ ಮಾತನ್ನು ಕೇಳಿ ಸೌಗಂಧಿ ಕಕ್ಕಾಬಿಕ್ಕಿಯಾಗುತ್ತಾಳೆ. ತಂದೆ ಒಬ್ಬಂಟಿ ಮಗಳ ರಕ್ಷಣೆಗೆ ನಿಂತ ಯೋಧನಂತೆ ಇನ್ನೂ ತಾಯಿಗೆ ವಿವರಿಸುತ್ತಲೇ ಇದ್ದರು. ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತ ಮಗಳು ತಾನಿಲ್ಲದಿದ್ದರೆ ಕೆಟ್ಟೇ ಹೋಗುತ್ತಾಳೆ ಅಥವಾ ಊರಿಗೆ ಊರೇ ಅವಳಿಗೆ ಬಸುರು ಮಾಡಲು ಹೊಂಚುತ್ತಿರುತ್ತದೆ ಎಂಬಂತೆ ತಂದೆಗೆ

ಸರಿಯಾಗಿಯೇ ಇದ್ದರು ತಾಯಿ. ಅವರ ಮಾತಿಗೆ ನಿರಾಳವಾದ ಒಂದು ಉಸಿರುಬಿಟ್ಟು ಹಾಗಾದರೆ ಅಡ್ಡಿಯಿಲ್ಲ ಎನ್ನುತ್ತಾರೆ. ಇಂಥವರ ಮಧ್ಯೆ ಇದ್ದ ಸೌದಗಂಧಿಗೆ ತನ್ನನ್ನು ತಾನೇ ಮರೆಯುವ ಮೊದಲು ಎಲ್ಲಾದರೂ ದೂರ ಒಂಟಿಯಾಗಿ ಇರಬೇಕು ಎಂದೆನಿಸುತ್ತದೆ. ಮನೆಯೊಡತಿ ಸೌಗಂಧಿಗೆ ರಾತ್ರಿ ಒಬ್ಬಳೇ ಮಲಗಲೂ ಬಿಡದೆ ತಾನು ಜೊತೆಯಲ್ಲಿರುತ್ತಿದ್ದಳು. ಮನೆಯೊಡತಿ ನಾಲ್ಕು ದಿನ ಊರಿಗೆಂದು ಹೋಗುತ್ತಾಳೆ. ಈ ನಾಲ್ಕು ದಿನವಾದರೂ ಸ್ವತಂತ್ರವಾಗಿ ಇರೋಣವೆಂದು ಸೌಗಂಧಿ ಬಯಸುತ್ತಾಳೆ. ಆದರೆ ಅಂದೇ ರಾತ್ರಿ ಆಕೆಯ ತಂದೆ ತಾಯಿ ಬಂದಿರುತ್ತಾರೆ. ಹೀಗೆ ಪ್ರೀತಿ, ಅಕ್ಕರೆಯಿಂದಲೇ ಹೆಣ್ಣುಮಗಳೊಬ್ಬಳ ಮೇಲೆ ಇಲ್ಲಸಲ್ಲದ ನಿರ್ಬಂಧಗಳನ್ನು ವಿಧಿಸಿ ಆಕೆಯನ್ನು ಅಶಕ್ತಳನ್ನಾಗಿ ಮಾಡಲಾಗುತ್ತಿದೆ.

ಸಮಾಜದ ಎಲ್ಲಾ ಕಡೆಗಳಲ್ಲಿಯು ಕಂಡುಬರುವ ವಿವಾಹ ಸಂಸ್ಥೆಯು ಸಮುದಾಯದಿಂದ ಸಮುದಾಯಕ್ಕೆ ಕೆಲವು ಭಿನ್ನಲಕ್ಷಣಗಳನ್ನು ಹೊಂದಿದ್ದರೂ, ಹೆಚ್ಚಿನ ಪ್ರಮಾಣದ ಸಾಮ್ಯವನ್ನೇ ಹೊಂದಿದೆ. ಅದರಂತೆ ಭಾರತದಲ್ಲಿರುವ ಬುಡಕಟ್ಟು ಸಮುದಾಯದಿಂದ ಹಿಡಿದು ಇಸ್ಲಾಂ, ಹಿಂದೂ, ಜೈನ್ ಎಲ್ಲಾ ಸಂದರ್ಭಗಳಲ್ಲಿ ಅದು ಕೆಲವು ವ್ಯತ್ಯಾಸಗಳನ್ನು ಹೊಂದಿದ್ದರೂ, ಅದನ್ನೆಲ್ಲಾ ಮೀರಿದ ಪಿತೃಪ್ರಧಾನತೆಯ ತುಡಿತವನ್ನು ಹೊಂದಿದೆ. ನಾಗರೀಕತೆಯ ಯಾವ ಘಟ್ಟದಲ್ಲಿ ವಿವಾಹ ಸಂಸ್ಥೆಯಲ್ಲಿನ ಸ್ತ್ರೀಪುರುಷ ಪಾತ್ರಗಳು ಲಿಂಗತಾರತಮ್ಯಕ್ಕೆ ಅನುಗುಣವಾಗಿ ನಿರ್ಬಂಧಗಳನ್ನು ವಿಧಿಸುವ ಸಂಸ್ಥೆಯಾಗಿದೆ.

ಸಾಮಾನ್ಯಾರ್ಥದಲ್ಲಿ ವಿವಾಹವು ಸ್ತ್ರೀಪುರುಷರಿಬ್ಬರಿಗೂ ಅನಿವಾರ್ಯವೆನ್ನಲಾದರೂ, ಈ ಅನಿವಾರ್ಯತೆಯು ಸ್ತ್ರೀಗೆ ಅಧೀನತೆಯನ್ನು ಪುರುಷನಿಗೆ ಅಧಿಕಾರವನ್ನು ದೊರಕಿಸಿ ಕೊಡುವುದಾಗಿದೆ. ಭಾರತೀಯ ಸಮಾಜದಲ್ಲಿ ಪುರುಷನಿಗೆ ವಿವಾಹ ಆಯ್ಕೆಯ ವಿಚಾರವಾಗಿದೆ. ಸ್ತ್ರೀಗೆ ಮಾತ್ರ ಆಯ್ಕೆಯ ಮಾದರಿಗಳೇ ಇಲ್ಲ. ಪುರುಷ ಒಮ್ಮೆ ವಿವಾಹಸಂಸ್ಥೆ ಪ್ರವೇಶಿಸಿದರೂ ಆತನ ಸಂಪೂರ್ಣ ನಿಷ್ಠೆ ಅದಕ್ಕೆ ಇರಬೇಕೆಂದಿಲ್ಲ. ಆತ ವಿವಾಹ ಸಂಸ್ಥೆಯಲ್ಲಿದ್ದುಕೊಂಡೇ ಉಳಿದ ಎಲ್ಲಾ ಸಂಸ್ಥೆಗಳಲ್ಲಿ ಕೂಡ ತನ್ನನ್ನು ತೊಡಗಿಸಿಕೊಳ್ಳಬಹುದು. ಸ್ತ್ರೀಗೆ ಮಾತ್ರ ಈ ಯಾವ ಬಗೆಯ ಸಮಾನಾಂತರ ಆಸಕ್ತಿಗಳು ಆಯ್ಕೆಗಳು ಸಮಾಜದಲ್ಲಿಲ್ಲ. ವಿವಾಹವು ಆಕೆಗೆ ಕಡ್ಡಾಯವಾದ ಹಾಗೂ ಲೌಕಿಕ-ಪಾರಮಾರ್ಥಿಕ ಸಾರ್ಥ್ಯಕ್ಯಗಳೆರಡನ್ನೂ ತಂದುಕೊಡುವ ಸಂಸ್ಥೆಯಾಗಿದೆ. ಮೇಲುನೋಟಕ್ಕೆ ಭಾರತೀಯ ಸ್ತ್ರೀಯರಿಗೆ ಅಪಾರ ಭದ್ರತೆಯನ್ನು ಸಾಮಾಜಿಕ ಸ್ಥಾನಮಾನವನ್ನು ಒದಗಿಸಿಕೊಡುವಂತೆ ಕಾಣುವ ಈ ಸಂಸ್ಥೆ ತನ್ನಲ್ಲಿ ಅಳವಡಿಸಿಕೊಂಡಿರುವ ಲಿಂಗತಾರತಮ್ಯವು ಸ್ತ್ರೀ ಪುರುಷ ಪಾತ್ರವಿಭಜನೆಯಿಂದಾಗಿ ಸ್ತ್ರೀಗೆ ಅಲವಾರು ಸಮಸ್ಯೆಗಳನ್ನು ತಂದೊಡ್ಡಿದೆ. ಅವುಗಳಲ್ಲಿ ಮುಖ್ಯವಾದುದು ಸ್ತ್ರೀಗೆ ವಿವಾಹವೇ ಆತ್ಯಂತಿಕವೆಂದು ಕಡ್ಡಾಯಗೊಳಿಸುವುದು. ವಿವಾಹ ಸಂಸ್ಥೆಯನ್ನು ಪ್ರವೇಶಿಸಿದ ನಂತರ ಆಕೆಯ ಸಮಾನಾಂತರ ಆಸಕ್ತಿಗಳನ್ನು ನಿರಾಕರಿಸುವುದು, ಆ ಸಂಸ್ಥೆಯಿಂದ

ತನ್ನನ್ನು ತಾನು ಹಿಂತೆಗೆದುಕೊಳ್ಳುವ ಅಥವಾ ಬದಲಿಸಿಕೊಳ್ಳುವ ಯಾವ ಪರ್ಯಾಯಗಳನ್ನು ನೀಡದಿರುವುದು ಇದರ ಪರಿಣಾಮವಾಗಿ ಹೆಣ್ಣಿನ ಜೀವನದಲ್ಲಿ ವಿವಾಹ ಜರುಗುವುದು, ವಿವಾಹ ಮಾದರಿ, ವಿವಾಹಿತ ಸ್ತ್ರೀಯಸ್ಥಾನಮಾನ, ವಿವಾಹದ ಮುರಿಯುವಿಕೆ, ಸಂಗಾತಿಯನ್ನು ಕಳೆದುಕೊಳ್ಳುವುದು ಇತ್ಯಾದಿಗಳೆಲ್ಲವು ಸಮಸ್ಯೆಗಳನ್ನು ಸೃಷ್ಟಿಸುವುದೇ ಆಗುವಂತಾಗಿದೆ.

ವಿವಾಹದ ನಂತರ ಮುಂದುವರೆಯುವ ಲಿಂಗತಾರತಮ್ಯದ ಧೋರಣೆಗಳು, ಪುನರ್ ವಿವಾಹದ ನಿಷೇಧ, ಕುಟುಂಬದಾಚೆಗಿನ ಸ್ತ್ರೀಯ ಅಸ್ತಿತ್ವನಿರಾಕರಣೆ, ಆಸ್ತಿಯ ಹಕ್ಕಿನ ನಿರಾಕರಣೆ, ವಿವಾಹ ನಂತರ ಕಳೆದುಹೋಗುವ ತವರಿನ ಸ್ಥಾನಮಾನ ಇತ್ಯಾದಿ ಅಂಶಗಳು ಮಹಿಳೆಯನ್ನು ದುರ್ಬಲರನ್ನಾಗಿಸಿದೆ. ಗಂಡನನ್ನು ಕಳೆದುಕೊಂಡು ವಿಧವೆಯಾದ ಮಹಿಳೆಯರು ಅತ್ಯಂತ ಕಠಿಣವಾದ ಸಾಮಾಜಿಕ ಬದುಕನ್ನು ನಡೆಸಬೇಕಾಗಿದ್ದಿತು.

## ಕೌಟುಂಬಿಕ ನೆಲೆಯಲ್ಲಿ ಸ್ತ್ರೀ

ಪಿತೃಪ್ರಧಾನ ಸಮಾಜವು ಕುಟುಂಬವನ್ನು ಹೆಣ್ಣಿನ ಅತ್ಯಂತ ಸುರಕ್ಷಿತವಾದ ಸಾಮಾಜಿಕ ಸಂಸ್ಥೆ ಎಂದು ವ್ಯಾಖ್ಯಾನಿಸುತ್ತದೆ. ಕುಟುಂಬ ಹಾಗೂ ಕುಟುಂಬೇತರ ಸಾಮಾಜಿಕ ಸಂಸ್ಥೆಗಳನ್ನು ಒಳ ಹೊರ ಎಂದು ವಿಭಜಿಸುವುದಾದರೆ ಒಳಬಾಗದ ಒಡತಿಯು ಸ್ತ್ರೀಯಾಗಿರುತ್ತಾಳೆ ಎಂದೂ ವಿವರಿಸುತ್ತದೆ. ಆದರೆ ವಾಸ್ತವದಲ್ಲಿ ಜಗತ್ತಿನ ಬಹುತೇಕ ಎಲ್ಲಾ ಸಮಾಜಗಳ ಕುಟುಂಬ ವ್ಯವಸ್ಥೆಯು ಪಿತೃಪ್ರಧಾನ ನಿರ್ದೇಶನಗಳ ಆಧಾರದ ಮೇಲೆ ರಚನೆಗೊಂಡಿದ್ದಾಗಿದ್ದು. ಅಲ್ಲಿ ಸ್ತ್ರೀಯ ಸ್ಥಾನಮಾನ, ಅವಕಾಶಗಳು ಪಕ್ಕಕ್ಕೆ ತಳ್ಳಲ್ಪಟ್ಟಿರುತ್ತವೆ. ಲಿಂಗ ತಾರತಮ್ಯ, ಸ್ತ್ರೀಯರ ಮೇಲಿನ ದೌರ್ಜನ್ಯ ಅದರ ಸ್ಥಿರಮೌಲ್ಯವಾಗಿರುತ್ತದೆ. ಇಂತಹ ಸ್ಥಿತಿಯಲ್ಲಿಯು ಮಹಿಳೆಯರು ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು ಕುಟುಂಬದ ಏಳ್ಗೆಗಾಗಿ ಶ್ರಮವಹಿಸಿ ದುಡಿಯುತ್ತಾರೆ. ಗಂಡ, ಆತನ ಮನೆಯವರು ಹಾಗು ತಮ್ಮ ಮಕ್ಕಳ ಏಳ್ಗೆಗಾಗಿ, ಶ್ರೇಯೋಭಿವೃದ್ಧಿಗಾಗಿ ಎಂತಹ ಅವಮಾನವನ್ನಾದರು ಸಹಿಸಿಕೊಳ್ಳಲು ಸಿದ್ದರಿರುತ್ತಾರೆ. ಲೇಖಕಿ ತಮ್ಮ ಕಥೆಗಳಲ್ಲಿ ಇಂತಹ ಹಲವು ಪಾತ್ರಗಳನ್ನು ಕುರಿತು ತಿಳಿಸುತ್ತಾರೆ.

'ಸಂ–ಸಾರ' ಕಥೆಯಲ್ಲಿ ಇಡೀ ಸಂಸಾರದ ಜವಾಬ್ದಾರಿಯನ್ನು ನಿರ್ವಹಿಸುವ ತಾಯಿ ರಂಗೂವಿನ ಕಥೆ ಇದೆ. ಈಕೆಗೆ ಮುರಳಿ, ವಿಜಯ, ಸುಜಯ ಮೂವರು ಮಕ್ಕಳು ಸುಜಯನಿಗೆ ಮದುವೆ ಮಾಡಿ ಗಂಡನ ಮನೆಗೆ ಕಳಿಸುವಾಗ ಆಕೆ ತಾಯಿಯು ತನ್ನೊಂದಿಗೆ ಬರಬೇಕೆಂದು ಹಠಹಿಡಿಯುತ್ತಾಳೆ. ಆದರೆ ಮನೆಯಲ್ಲಿ ಸೊಸೆ ವತ್ಸಲ ಒಬ್ಬಳಿಗೆ ಪುಟ್ಟಮಗು ನೋಡಿಕೊಂಡು, ಮನೆಯ ಕೆಲಸ ಮಾಡಿಕೊಂಡಿರಲು ಸಾದ್ಯವಿಲ್ಲವೆಂದು ಸುಜಯನೊಂದಿಗೆ ಹೋಗಲಿಲ್ಲ. ಸುಜಯನನ್ನು ಕಳಿಸಿದ ಮೇಲೆ ಒಬ್ಬಳನ್ನೇ ಕಳಿಸಿದೆನಲ್ಲಾ ಎಂದು ದುಃಖಿತರಾಗುತ್ತಾರೆ. ಸುಜಯನನ್ನು ಕಳಿಸಿದ ಮಾರನೇ ದಿನವೇ ವಿಜಯನ ಪತ್ರಬರುತ್ತದೆ. ಈ ಬಾರಿ ಬಾಣಂತನಕ್ಕೆ ನಾನು ಗಂಡನ ಮನೆಯಲ್ಲಿಯೇ ಇರುತ್ತೇನೆ, ನೀನು ಇಲ್ಲಿಗೆ ಬಂದುಬಿಡು ಎಂದು ಕಾಗದ ಬರೆದಳು. ತಾಯಿಯಾದವಳಿಗೆ ಸುಜಯನ ಜೊತೆಯು ಹೋಗಲಿಕ್ಕಾಗಲಿಲ್ಲ, ವಿಜಯನ ಮನೆಗೆ ಹೋಗೋಣವೆಂದರೆ ಮನೆಯಲ್ಲಿ ವತ್ಸಲ ಒಬ್ಬಳಿಗೆ ಮಗುವನ್ನು ನೋಡಿಕೊಂಡಿರಲು ಸಾಧ್ಯವಿಲ್ಲ ಹಾಗಾಗಿ ದಿಕ್ಕೇ ತೋಚದಂತಾದಳು. ತಾಯಿಯ ಸ್ಥಿತಿಯನ್ನು ಕಂಡು ಕೊನೆಗೆ ಮರುಳಿ ವಿಜಯನನ್ನು ಮನೆಗೇ ಕರೆದುಕೊಂಡು ಬರಲು ಹೋಗುತ್ತಾನೆ. ಕಥೆಯ ಕೊನೆಯಲ್ಲಿ ರಂಗೂವಿನ ಗಂಡ ಆಕೆಯನ್ನು

ಕುರಿತು ಅಲ್ಲ ರಂಗೂ, ಸೊಸೆಗೂ ನೀನು ಬೇಕು, ಆ ಮಗಳಿಗೂ ಬೇಕು, ಈ ಮಗಳಿಗೂ ಬೇಕು, ಎಂದೆ ಸದಾ ಹೇಳುತ್ತಿರುವೆಯಲ್ಲ! ನನಗೂ ನೀನು ಬೇಕು ಎಂಬುದನ್ನು ಮರೆತೇಬಿಟ್ಟಿಯಾ' ಎಂಬ ಮಾತು ತುಂಬಾ ಅರ್ಥಪೂರ್ಣವಾದುದಾಗಿದೆ. ಕುಟುಂಬದಲ್ಲಿ ಸ್ತ್ರೀ ತನ್ನೆಲ್ಲಾ ಸುಖಸಂತೋಷಗಳನ್ನ ತ್ಯಾಗಮಾಡಿ ಮಕ್ಕಳ ಮತ್ತು ಮನೆಯ ಏಳಿಗೆಗಾಗಿ ಶ್ರಮಿಸುತ್ತಾಳೆ. ಮಕ್ಕಳ, ಮನೆಯವರ ಸಂತೋಷವನ್ನು ನೋಡಿ ತಾನು ಸಂತೊಷ ಪಡುವ ವಿಶಾಲ ಹೃದಯ ತಾಯಿಯದ್ದಾಗಿದೆ. ರಂಗೂ ತನ್ನ ಮೂವರು ಮಕ್ಕಳ ಪಾಲನೆಗಾಗಿ ತನ್ನನ್ನು ಅರ್ಪಿಸಿಕೊಂಡಿದ್ದಾಳೆ. ಈ ಕಥೆ ತಾಯಿಯ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

'ಶೋಧ' ಕಥೆಯಲ್ಲಿ ತನ್ನ ಅಸ್ಥಿತ್ವವನ್ನೇ ಕಳೆದುಕೊಳ್ಳುವ ಹೆಣ್ಣಿನ ಕಥೆಯಿದೆ. ಭಾರತಿ ಮದುವೆಯಾಗಿ ದೊಡ್ಡ ಮನೆಯನ್ನೇ ಸೇರಿದಳು. ವೈಭವ ಪ್ರೇರಿತವಾದ ಮನೆ ತೂಗುಮಂಚ, ಮತ್ತಿತರ ಎಲ್ಲಾ ವೈಭವ ಪ್ರೇರಿತವಾದ ವಸ್ತುಗಳೆಲ್ಲವು ಇದೆ. ಏನೇ ವೈಬೋಗಗಳಿದ್ದರು ಸಂಸಾರಕ್ಕಾಗಿಯೇ ದುಡಿಯುತ್ತಿದ್ದ ಭಾರತೀ ತನ್ನ ಅಸ್ಥಿತ್ವವನ್ನೇ ಕಳೆದುಕೊಳ್ಳುವ ಕಥೆಯಿದೆ.

'ಚಿಪ್ಪು' ಕಥೆಯಲ್ಲಿ ಹೆಣ್ಣಿನ ಆಸೆ, ಆಕಾಂಕ್ಷೆಗಳನ್ನು ಹಿರಿಯರು ಪ್ರೀತಿಯಿಂದಲೆ ದಮನಗೊಳಿಸುವ ಕಥೆಯಿದೆ. ಕಥಾನಾಯಕಿ (ಯಶೋಧಮ್ಮ) ಯಶೀ ತುಂಬಾ ಚೆಂದದ ಹುಡುಗಿ. ಈಕೆಗೆ ವರವನ್ನು ಹುಡುಕಲು ತಂದೆ ಪ್ರಯತ್ನಿಸುತ್ತಿರುತ್ತಾರೆ. ಮನೆಗೆ ಬಂದ ತಮ್ಮ ಸದಾಶಿವನಿಗೆ ಎಲ್ಲಾದರು ವರವಿದ್ದರೆ ಹೇಳು ಎಂದರು. ಆಗ ಯಶೀಯ ಚಿಕ್ಕಪ್ಪ ನಮ್ಮ ಶಾಲಿನಿಗೆ ಬಂದ ವರ ಪರವಾಗಿಲ್ಲ. ಬೇಕಾದರೆ ನೋಡೋಣ ಎನ್ನುತ್ತಾರೆ. ಅದಕ್ಕೆ ಯಶೀಯ ಅಪ್ಪನೂ ಒಪ್ಪುತ್ತಾರೆ. ಯಶೀಗೆ ವರಯಾರು? ಅವನೇನು? ಎಲ್ಲಿಯವನು? ಹೇಗಿದ್ದಾನೊ? ಎಂಬ ಸಹಸ್ರಾರು ಪ್ರಶ್ನೆಗಳು ಹುಟ್ಟುತ್ತವೆ. ಆದರೆ ಯಶೀಯ ತಂದೆ-ತಾಯಿಗೆ ಯಾವೊಂದು ಪ್ರಶ್ನೆಯು ಹುಟ್ಟುವುದಿಲ್ಲ. ಹೇಗಾದರು ಮದುವೆ ಮಾಡಿದರೆ ತಮ್ಮ ಜವಾಬ್ದಾರಿ ಕಳೆಯಿತು ಎಂಬ ಭಾವನೆ ಅವರದು. ರಂಗಜ್ಜಿ 'ಈ ವರ್ಷ ಅವಳನ್ನು ಹೊರಹಾಕಿದರೆ ಇವ ಬದುಕಿದ' ಎಂದು ಸದಾಶಿವನಿಗೆ ಹೇಳುವುದನ್ನು ಯಶೀ ಕೇಳಿಸಿಕೊಂಡು ಅಜ್ಜಿಯ ಮೇಲೆ ಕೋಪಗೊಂಡಳು. ಆದರೆ ಅದನ್ನು ವ್ಯಕ್ತಪಡಿಸಲು ತನ್ನ ಭಾವನೆಯನ್ನು ಹಿರಿಯರೆದುರು ಹೇಳಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಯಶೀಯ ತಾಯಿ ಒಮ್ಮೆ ವರನ ಬಗ್ಗೆ ವಿಚಾರಿಸಿದಾಗ 'ಯಶೀಯನ್ನ ಯಾರಿಗೆ ಕೋಡಬೇಕಂತ ನನಗೆ ಗೊತ್ತಿಲ್ಲವೇ ಎಂದು ಗದರಿಸುತ್ತಾರೆ. ಹಿರಿಯರು ಮದುವೆ ಮಾಡುವುದು ನಮ್ಮ ಜವಾಬ್ದಾರಿ. ಆಮೇಲೆ ಅವರವರ

ಅದೃಷ್ಟ, ಹಣೆಬರಹ ಎನ್ನುತ್ತಾರೆ. ರಂಗಜ್ಜ ನಮ್ಮ ಯಶೀಯಂತಹ ಹುಡುಗಿ ಎಲ್ಲೂ ಸಿಗುವುದಿಲ್ಲ, ಯಾರೊಂದಿಗೆ ಬೇಕಾದರೂ ಹೊಂದಿಕೊಂಡು ಹೋಗಬಲ್ಲಳು ಎಂದು ಹೇಳುತ್ತಿರುತ್ತಾರೆ. ಹೀಗೆ ಈ ಪ್ರೀತಿಯ ಚಿಪ್ಪಿನಲ್ಲಿ ಆಕೆಯ ಆಸೆ-ಆಕಾಂಕ್ಷೆಗಳನ್ನು ಸಮಾದಿ ಮಾಡುತ್ತಾರೆ. ಹೀಗೆ ಹೆಣ್ಣೊಬ್ಬಳ ಮನಸ್ಸಿನಲ್ಲಿನ ಆಸೆ-ಆಕಾಂಕ್ಷೆಗಳು, ಆದರೆ ಹಿರಿಯರ ಪ್ರೀತಿಯೆ ಕಾರಣವಾಗಿ ಅದನ್ನು ಎಲ್ಲಿಯೂ ಹೇಳಿಕೊಳ್ಳಲಾಗದೆ ನೋವು, ವೇದನೆ, ಸ್ತ್ರೀಯ ಕಷ್ಟಸಹಿಷ್ಣುತೆ ಇಲ್ಲಿ ವ್ಯಕ್ತವಾಗುತ್ತದೆ.

'ವರ್ತುಲ' ಕಥೆಯಲ್ಲಿ ಸಂಸಾರದ ಜಂಜಾಟದ ನಡುವೆ ಜೀವನ ಸಾಗಿಸುವ ಕುಸುಮಾಳ ಕಥೆ ಇದೆ. ಕುಸುಮ ಮದುವೆಯಾಗಿ ಹೋದನಂತರ ಗಂಡನಿಗೆ ಸರ್ಕಾರಿ ಕೆಲಸ ಸಿಗುತ್ತದೆ. ಸರ್ಕಾರಿ ಕೆಲಸ ಸಿಕ್ಕಿದ್ದರಿಂದ ಗಂಡ-ಹೆಂಡತಿ ಮಕ್ಕಳೊಡನೆ ಬೇರೆಡೆ ಬಂದು ಜೀವನ ನಡೆಸುತ್ತಾರೆ. ಕುಸುಮಾಳ ಅತ್ತೆಗೆ ಮಗ ಬೇರೆಡೆ ಹೋಗಿರುವುದು ಇಷ್ಟವಿಲ್ಲ. ಅತ್ತೆ ಒಮ್ಮೆ ಮನೆಗೆ ಬಂದಾಗ ಮಕ್ಕಳು ಬೆಳೆದು ದೊಡ್ಡವರಾಗುವವರೆಗೆ ಮಾತ್ರ ಅಪ್ಪ-ಅಮ್ಮ ಬೇಕು, ಆಮೇಲೆ ತಾನಾಯಿತು ತನ್ನ ಹೆಂಡತಿ ಮಕ್ಕಳಾಯಿತು, ಅತ್ತೆಯ ಮಾತಿನಿಂದ ಕುಸುಮ ಬೇಸರಗೊಂಡಿದ್ದಳು. ಕುಸುಮಳಿಗೆ ಮನೆಬಿಟ್ಟು ಹೊರಗೆ ಹೋಗಲು ಇಷ್ಟವಿರಲಿಲ್ಲ ಗಂಡನ ಒತ್ತಾಯಕ್ಕೆ ಹೊರಗೆ ಬಂದಿರುತ್ತಾಳೆ. ಕುಸುಮಳ ನಾದಿನಿ ರೇಖಾಗೆ ಒಬ್ಬ ವರನನ್ನು ನೋಡುತ್ತಾರೆ. ಕುಸುಮಳ ಮನೆಗೆ ಬಂದ ಅತ್ತೆ ರೇಖಾನ ಗಂಡನ ಮನೆಯ ವಿಚಾರ ತಿಳಿಸುತ್ತಾರೆ. ರೇಖಾಳ ಹುಡುಗ ಮದರಾಸಿನಲ್ಲಿ ಇರುವುದು, ಮದುವೆಯಾದ ಮೇಲೆ ಅಲ್ಲಿಯೇ ಬಿಡಾರ ಹೂಡುತ್ತಾನೆ. ಹಾಗಾಗಿ ರೇಖಾಳನ್ನು ಕೊಡುವುದು ಎಂದು ಅತ್ತೆ ಹೇಳುತ್ತಾರೆ. ಅವಿಭಕ್ತ ಕುಟುಂಬವಾದ ಅವರಮನೆಯನ್ನು ದೊಡ್ಡಿ ಎಂದು ಅವರು ಜರಿಯುತ್ತಾರೆ. ತನ್ನ ಮಗಳು ಗಂಡನೊಂದಿಗೆ ಬೇರೆಡೆ ಮನೆಮಾಡಿಕೊಂಡು ಆರಾಮವಾಗಿರಬೇಕು. ಆದರೆ ತನ್ನ ಮಗ-ಸೊಸೆ ಸರ್ಕಾರಿ ಕೆಲಸವನ್ನು ಬಿಟ್ಟು ಮನೆಯಲ್ಲಿಯೇ ಇರಬೇಕೆಂದು ಬಯಸುವ ಅತ್ತೆಯ ಮನೋಧೋರಣೆಯನ್ನು ಕಂಡು ಕುಸುಮ ವಿಚಲಿತಳಾದಳು. ಕುಸುಮ ಮುಂದೆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಊರಿಗೆ ಹೋಗೋಣ ಎಂಬ ಮಾತನ್ನು ಗಂಡನಿಗೆ ಹೇಳಲಿಲ್ಲ.

ಈ ಕಥೆಯು ಆಧುನಿಕ ಸಮಾಜದಲ್ಲಿ ಕೌಟುಂಬಿಕ ನೆಲೆಯಲ್ಲಾಗುತ್ತಿರುವ ಬದಲಾವಣೆಯನ್ನು ತಿಳಿಸುತ್ತದೆ. ಸಾಂಪ್ರದಾಯಕ ಮಾದರಿಯ ಅವಿಭಕ್ತ ಕುಟುಂಬಗಳು ಮರೆಯಾಗಿ ಗಂಡ-ಹೆಂಡತಿ ಮಕ್ಕಳೊಂದಿಗೆ ವಾಸಿಸುವ ವಿಭಕ್ತ ಕುಟುಂಬಗಳು ಕಂಡುಬರುತ್ತಿವೆ. ಕುಟುಂಬದ ಛಿದ್ರೀಕರಣವನ್ನು ಈ ಕಥೆ ತಿಳಿಸುತ್ತದೆ. ಕುಸುಮಾ ಕುಟುಂಬದವರೆಲ್ಲರು ಒಂದೆಡೆ ಜೀವಿಸಬೇಕೆಂದು

ಬಯಸಿ ಸಂಬಂಧವನ್ನು ಬಿಗಿಗೊಳಿಸಲು ಪ್ರಯತ್ನಿಸುತ್ತಾಳೆ. ಹೀಗೆ ಹೆಣ್ಣು ಕುಟುಂಬದ ಏಳ್ಗೆಗಾಗಿ ಶ್ರಮವಹಿಸಿ ದುಡಿಯುತ್ತಾಳೆಂಬುದರ ವಿವರಣೆ ಇದೆ. ಅದೇ ಸಂದರ್ಭದಲ್ಲಿ ತಾಯಿಯ ಮತ್ತು ಗಂಡುಮಕ್ಕಳ ಸ್ವಾರ್ಥದ ಬದುಕಿನ ಸೂಚನೆಯಿದೆ.

## ಉಪಸಂಹಾರ:-

ವೈದೇಹಿಯವರು ಕಥಾಸಾಹಿತ್ಯದಲ್ಲಿ ತಮ್ಮದೇ ಆದ ಬರವಣಿಗೆಯ ಮಾರ್ಗವನ್ನೇ ಹುಟ್ಟುಹಾಕಿದರು. ಕುಂದಾಪುರದ ಸ್ಥಳೀಯ ಕನ್ನಡ ಭಾಷೆಯನ್ನು ತಮ್ಮ ಬರವಣಿಗೆಯಲ್ಲಿ ಬಳಸಿದ್ದಾರೆ. ವೈದೇಹಿಯವರು ಬರೆಯುವುದಕ್ಕೆ ಆರಂಭಿಸುವುದಕ್ಕೆ ಮುನ್ನ ಬರವಣಿಗೆಗೆ ಕೆಲವು ನಿರ್ಬಂಧಗಳನ್ನು ವಿಧಿಸಿಕೊಂಡಿದ್ದರು. ಆದರೆ ಲೇಖಕಿ ಎಲ್ಲಾನಿರ್ಬಂಧಗಳನ್ನು ಮೀರಿ ತಮ್ಮದೇ ದಾಟಿಯನ್ನು ಅಭಿವೃದ್ಧಿಪಡಿಸಿದರು.

ವೈದೇಹಿಯವರ ಕಥೆಗಳಲ್ಲಿ ಸಂಪೂರ್ಣ ಗ್ರಾಮೀಣ ಪರಿಸರ ಕಣ್ಣಮುಂದೆ ಬರುವಂತೆ ಚಿತ್ರಿಸಿದ್ದಾರೆ. ಗ್ರಾಮೀಣ ಜನರ ಜನಜೀವನ, ಆಚಾರ-ವಿಚಾರ, ಸಂಸ್ಕೃತಿ, ಮಡಿ-ಮೈಲಿಗೆ, ಆಹಾರ ಕ್ರಮ, ಮೂಢನಂಬಿಕೆ, ಗ್ರಾಮೀಣರ ಮುಗ್ಧತೆ, ಕೃಷಿಪದ್ದತಿಗಳ ವಿವರಗಳು ಕಥೆಯಲ್ಲಿ ಹಾಸುಹೊಕ್ಕಾಗಿವೆ. ವೈದೇಹಿಯವರ ಕಥೆಗಳಲ್ಲಿ ಬದುಕಿನ ಚಿತ್ರಣ. ಜನರ ನಡುವಿನ ಸಂಘರ್ಷ ಗಂಡು-ಹೆಣ್ಣಿನ ಸಂಬಂಧ, ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ಸ್ತ್ರೀಯಸ್ಥಾನ, ಸ್ತ್ರೀಯರ ಬಗೆಗೆ ಸಮಾಜದ ಧೋರಣೆ ಮೊದಲಾದ ವಿಷಯಗಳು ಪ್ರಸ್ಥಾಪಿಸಲ್ಪಟ್ಟಿವೆ. ಅದೇ ರೀತಿ ಸಮಾಜದ ವಿವಿಧ ಸ್ಥರದ ಹೆಂಗಸರು, ಜಾತಿಯಲ್ಲಿ ಮೇಲ್ವರ್ಗದವರಾದರು ಕೂಡ ಕೆಲವು ಸಂದರ್ಭಗಳಲ್ಲಿ ಶೂದ್ರರರಿಗಿಂತ ಕೆಳಮಟ್ಟದ ಜೀವನ ನಡೆಸಬೇಕಾದ ಹೆಂಗಸರ ಅಂತರಂಗದ ಬದುಕಿನ ಬಗ್ಗೆ ಗಮನ ಹರಿಸುತ್ತಾರೆ.

ವೈದೇಹಿಯವರು ತಮ್ಮ ಕಥೆಗಳಲ್ಲಿ ಪ್ರಾಚೀನ ಸಂಸ್ಥೆಗಳಾದ ಕುಟುಂಬ ಮತ್ತು ವಿವಾಹದ ಬಗ್ಗೆಯೂ ಗಮನಹರಿಸುತ್ತಾರೆ. ಅವಿಭಕ್ತ ಕುಟುಂಬದಲ್ಲಿ ಜೀವನ ನಡೆಸುವಾಗ ಸಿಗುವ ಆನಂದ ಮತ್ತು ಭದ್ರತೆಯ ಬಗ್ಗೆ ತಿಳಿಸುತ್ತಾರೆ. ಹಾಗೆಯೇ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ, ಮಕ್ಕಳ ಸ್ವಾರ್ಥಭಾವನೆಯೆ ಕಾರಣವಾಗಿ ಅವಿಭಕ್ತ ಕುಟುಂಬ ಅವನತಿಯಾಗುವುದಕ್ಕೆ ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಆಧುನಿಕತೆಯ ಬಿರುಗಾಳಿಗೆ ವೈವಾಹಿಕ ಸಂಬಂಧವು ಸಡಿಲಗೊಳ್ಳುತ್ತಿರುವ ಸುಳಿವು ಕಥೆಗಳಲ್ಲಿದೆ. 'ಒಂದು ಅಪರಾಧ ತನಿಖೆ' ಕಥೆಯಲ್ಲಿ ಪತಿ-ಪತ್ನಿಯರ ಸಂಬಂಧ ಕಲುಷಿತಗೊಳ್ಳುವ ವಿಚಾರವಿದೆ. ಒಟ್ಟಿನಲ್ಲಿ ಪಾರಂಪರಿಕ ಮೌಲ್ಯಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ದುರ್ಬಲಗೊಳ್ಳುತ್ತಿರುವ ಸೂಚನೆ ಕಥೆಗಳಲ್ಲಿದೆ.

ವೈದೇಹಿಯವರು ತಮ್ಮ ಅನುಭವಗಳನ್ನು ಕಥಾರೂಪದಲ್ಲಿ ಹರಳುಗಟ್ಟಿಸಿಕೊಳ್ಳುವ ಪ್ರಯತ್ನದ ಜತೆಜತೆಗೇ, ಕಥೆ ಕಟ್ಟುವ ಚಾತುರ್ಯಕ್ಕೆ ಬಲಿಗೊಟ್ಟುಕೊಳ್ಳದೆ, ತನ್ನದೇ ಸಾಚಾ ಅನುಭವಗಳನ್ನು ಇವು ಕ್ಷುಲ್ಲಕವೆನಿಸಿಯಾವೋ ಎಂಬ ಸಂದೇಹ ಸಂಕೋಚಗಳಿಂದ ಬಾಧಿತವಾಗದೆ, ನಿಷ್ಠೆಯಿಂದ ಆಧರಿಸುವ ಹಾಗು ಸ್ವಂತಿಕೆಯ ಮಿತಿಯಲ್ಲೇ ತನ್ನತನವನ್ನು ಮೀರಿಕೊಳ್ಳಲು ಪ್ರಯತ್ನಿಸುವ್ ಸೃಜನಪ್ರಜ್ಞೆ ಮುಂತಾದ ಹಲವು ಅಪರೂಪದ ಗುಣಗಳನ್ನು ಇವರ ಕಥೆಗಳಲ್ಲಿ ಕಾಣಬಹುದು. ಲೇಖಕಿ ಸರಳವಾಗಿ ಬರೆದರು ಸಂಕೀರ್ಣವಾದ ಭಾಷೆ ಸಾಧಿಸುತ್ತಾರೆ. ಮಾಸ್ತಿಯವರ ಸಣ್ಣಕತೆ, ಕಾರಂತರ ಕಾದಂಬರಿಗಳ ಹಿರಿಮೆಗೆ ಕಾರಣವಾಗಿದ್ದ ಈ ಗುಣ ತನ್ನ ಪ್ರಜ್ಞಾಪೂರ್ವಕವಾಗಿ ಮೈಗೂಡಿಸಿಕೊಂಡ ಸಣ್ಣ ಕಥೆಗಾರರಲ್ಲಿ ವೈದೇಹಿ ಒಬ್ಬರು. ಹಾಗೆಂದೇ 'ಒಂದು ಅಪರಾಧ ತನಿಖೆ' ಇತ್ಯಾದಿ ಕಥೆಗಳಲ್ಲಿ ಬದುಕಿನ ವಿವರಗಳನ್ನು ಗ್ರಹಿಸುವ ಇವರ ಪರಿ ಮೆಚ್ಚುಗೆಗೆ ಪಾತ್ರವಾಗುತ್ತದೆ.

ಕಥೆಗಳಿಗೆ ಕಾವ್ಯದ ಸೊಬಗನ್ನು ತಂದವರು ವೈದೇಹಿ. ಅವರ ಹಾಗೆ ಭಾಷೆಯನ್ನು ದುಡಿಸಿಕೊಂಡ ಲೇಖಕರು ಕನ್ನಡದಲ್ಲಿ ಅಪರೂಪ. ಇವರ ಕಥೆಗಳಲ್ಲಿ ವಸ್ತುವಿಗಿಂತ ಭಾವಕ್ಕೆ, ತಂತ್ರಕ್ಕೆ ಮತ್ತು ಧ್ವನಿಗೇ ಪ್ರಾಧಾನ್ಯ. ಲೇಖಕಿ ತನ್ನ ಕಥೆಗಳಲ್ಲಿ ಸೆರೆಹಿಡಿದಿರುವ ಒಂದು ಭಾವ, ಒಂದು ಭಂಗಿ, ಒಂದು ದೃಶ್ಯ. ಒಂದು ಮಾತಿನ ವಿಲಾಸ, ಹೆಕ್ಕಿ ತೆಗೆದಿಟ್ಟು ಹೃದಯದ ಹತ್ತಿರ ಇಟ್ಟುಕೊಳ್ಳುವಂಥವು ಮತ್ತೆ ಮತ್ತೆ ನೋಡಲಿಕ್ಕಾಗಿ. ಮೊಗೆದಷ್ಟು ಸಿಗುವ ಅನುಭವ ಸಂಪತ್ತು ಇಲ್ಲಿ ಅಕ್ಷಯವಾಗಿದೆ. ರಂಗಿನಂಗಳ ನಿರ್ಮಿಸುವ ಸೂರ್ಯ, ಕೂತಲ್ಲಿಂದ ಮಿಸುಕಾಡದ ಆದರೆ ಇಡೀ ಜಗತ್ತನ್ನು ಕುಣಿಸುವ ಕಲಿಪುರುಷ, ಬದುಕು-ಮೃತ್ಯುಗಳ ನಿಗೂಢತೆ ಎಲ್ಲವನ್ನೂ ಕಳೆದು ಚೊಕ್ಕವಾಗಿ ತಾಜಾಪ್ರಕೃತಿಯಾಗುವ 'ಶಕುಂತಲೆ, ಸಾವಿಗೆ ಜೀವದ ಹೊಲಿಗೆ ಹಾಕುವ ಮುಸ್ತಫಾ- ಈ ಚಿತ್ರಗಳು ವಾಸ್ತವತೆ ಮತ್ತು ಫ್ಯಾಂಟಸಿಗಳ ಮಧ್ಯೆ ಭಾವಭಾಷೆಗಳ ಸೇತುವೆ ನಿರ್ಮಿಸಿ ಬೇರೊಂದು ಲೋಕವನ್ನೇ ನಮ್ಮ ಮುಂದೆ ಅನಾವರಣಗೊಳಿಸುತ್ತದೆ.

ಸ್ತ್ರೀ ಬದುಕಿನ ಜಗತ್ತಿನ ವಿಶ್ಲೇಷಣೆ ಇವರ ಕಥೆಗಳಲ್ಲಿ ಅಡಕವಾಗಿದೆ. ತಮ್ಮ ಶೋಷಣೆಯ ವಿರುದ್ದ ಬಂಡೇಳುವ ಸ್ತ್ರೀ ಪಾತ್ರಗಳು 'ಅಮ್ಮಚ್ಚಿಯೆಂಬ ನೆನಪು' 'ಅಂತರಂಗದ ಪುಟಗಳು' 'ಒಂದು ಅಪರಾಧ ತನಿಖೆ' ಕಥೆಗಳಲ್ಲಿ ಕಂಡು ಬರುತ್ತದೆ. 'ಅಮ್ಮಚ್ಚಿಯೆಂಬ ನೆನಪು' ಕಥೆಯಲ್ಲಿ ಒಬ್ಬ ತಂದೆಯಿಲ್ಲದ ಎಳೆಯ ಹುಡುಗಿ ಅಮ್ಮಚ್ಚಿಯ ಕುರಿತದ್ದು. ಆಕೆ ಬಂಡಾಯದ ಅರಿವನ್ನು ಒಳಗಿಟ್ಟುಕೊಂಡಿರುವವಳು; ಗಟ್ಟಿಯಾದ ವೈಯಕ್ತಿಕತೆಯಿರುವವಳು. ವೆಂಕಪ್ಪಯ್ಯನಿಂದ

ಅತ್ಯಾಚಾರಕ್ಕು ದಮನಕ್ಕೂ ಒಳಗಾಗಿ ಆಕೆ ಆತನನ್ನು ಒತ್ತಾಯದಿಂದ ಮದುವೆಯಾಗಿದ್ದಾಳೆ. ಈಕೆಗಿಂತ ಕಿರಿಯಳಾದ ಮತ್ತು ಆಕೆಯ ಅಂತಃಶಕ್ತಿಯನ್ನು ಮೆಚ್ಚುವ ಆಕೆಯ ಗೆಳತಿ ಇಲ್ಲಿ ಕಥೆಯನ್ನು ವಸ್ತುನಿಷ್ಠವಾಗಿ ಹೇಳತೊಡಗಿದ್ದಾಳೆ. ಈ ಕಥೆಯಲ್ಲಿ ಪ್ರೌಢವಾದೊಂದು ಕಾಲ್ಪನಿಕಥೆಯಿದೆ. ಗಟ್ಟಿಯಾದ ಹಾಸ್ಯಪ್ರಜ್ಞೆ ಉದ್ದಕ್ಕೂ ಕೆಲಸಮಾಡಿದೆ. ಸ್ತ್ರೀವಾದಿ ಧೋರಣೆ ಎಂಬುದು ಇಲ್ಲಿ ಕಥನದ ನೇಯ್ಗೆಯಲ್ಲಿ ಮತ್ತು ಕೇಂದ್ರ ಪಾತ್ರದ ನಿರೂಪಣೆಯಲ್ಲೇ ಅಂತರ್ಗತವಾಗಿದ್ದು ಎಲ್ಲೂ ಅದು ಬುದ್ಧಿ ಪೂರ್ವಕವಾಗಿ ಮೇಲಿನಿಂದ ಸೇರಿಸಿದಂತೆ ಅನ್ನಿಸುವುದಿಲ್ಲ.

ಲೇಖಕಿಯ ಎಲ್ಲ ಕಥೆಗಳ ಹಿಂದೆ 'ಗಂಡು' 'ಹೆಣ್ಣು'ಗಳು ಕೂಡಿರುವ ಒಂದು ಲೋಕವಿದೆ; ಆ ಲೋಕದಲ್ಲಿ ಮಿಥುನ ವಿರುವಂತೆಯೇ ವಿಚ್ಛೇದವೂ ಇದೆ; ಸ್ವಾರಸ್ಯದ ಮಾತುಗಾರಿಕೆಯಿರುವಷ್ಟೇ ಗಾಢವಾದ ವಿಷಾದದ ಮಂದ್ರಸ್ಥಾಯಿಯೂ ಇದೆ. ಇಲ್ಲಿ ಉಲ್ಲಾಸದ ಉಬ್ಬರ ಕೆಲವೊಮ್ಮೆ ಮೊರೆದು ಕಾಣಿಸಿಕೊಂಡರೆ ಕೆಲವೊಮ್ಮೆ ಹಿಂಸೆಯ ನೆರಳು ಚಾಚಿಕೊಳ್ಳುತ್ತದೆ. ಪಾತ್ರಗಳಲ್ಲಿ ಸನ್ನಿವೇಶಗಳಲ್ಲಿ ಮತ್ತು ಇಡಿಯ ಕಥನ ಕ್ರಮದಲ್ಲಿ ಹೀಗೆ ವಿರುದ್ಧ ಭಾವಗಳನ್ನು ಮಿಥುನಗೊಳಿಸಿ ಕಾಣಿಸುವ ಒಂದು ವಿಶಿಷ್ಟ ಕಲೆಗಾರಿಕೆ ಪ್ರಾಯಶಃ ವೈದೇಹಿಯವರ ಕಥೆಗಳಲ್ಲಿ ಪ್ರಮುಖವಾದದ್ದು.

ಒಟ್ಟಿನಲ್ಲಿ ವೈದೇಹಿಯವರು ತಮ್ಮ ಬರವಣಿಗೆಯ ಮೂಲಕ ಸಮಾಜದಲ್ಲಿನ ಸಂಪ್ರದಾಯ. ಮೂಢನಂಬಿಕೆಗಳಿಂದ ಮಹಿಳೆಯರು ಅನುಭವಿಸುವ ಯಾತನೆ. ಮಹಿಳೆಯರ ಮೇಲಿನ ಶೋಷಣೆಗಳ ಮೇಲೆ ಬೆಳಕು ಚೆಲ್ಲುತ್ತಾರೆ. ಆ ಮೂಲಕ ಪ್ರತಿಯೊಬ್ಬ ಮಹಿಳೆಯರು ಜಾಗೃತರಾಗಿ ತಮ್ಮ ಶೋಷಣೆಯ ವಿರುದ್ಧ ಹೋರಾಡಿ ಸಮಾಜದಲ್ಲಿ ಉನ್ನತ ಸ್ಥಾನಮಾನಪಡೆಯಬೇಕೆಂದು ಹಂಬಲ ಲೇಖಕಿಯದ್ದಾಗಿದೆ.

## ಲೇಖಕಿಯ ಪರಿಚಯ:-

| | | |
|---|---|---|
| ಹೆಸರು | : | ಜಾನಕಿ ಶ್ರೀನಿವಾಸಮೂರ್ತಿ |
| ಕಾವ್ಯನಾಮ | : | ವೈದೇಹಿ. |
| ಜನನ | : | 12-02-1945. |
| ಊರು | : | ಕುಂದಾಪುರ |
| ವಿದ್ಯಾಭ್ಯಾಸ | : | ಬಿ.ಕಾಂ. |
| ವಿಳಾಸ | : | 'ಇರುವಂತಿಗೆ' |
| | | ಅನಂತನಗರ, 2ನೇ ಹಂತ, |
| | | ಮಣಿಪಾಲ 576104. |
| | | ದೂರವಾಣಿ: 0820 2572395 |
| ತಂದೆ | : | ದಿ.ಶ್ರೀ. ಎ.ವಿ.ಎನ್. ಹೆಬ್ಬಾರ್. |
| ತಾಯಿ | : | ದಿ. ಶ್ರೀಮತಿ ಮಹಾಲಕ್ಷ್ಮಿಯಮ್ಮ. |
| ಮಾವ/ಅತ್ತೆ | : | ದಿ. ಶ್ರೀ ಕಾರಗಡಿ ಲಕ್ಷ್ಮಣರಾವ್, |
| | | ದಿ. ಶ್ರೀಮತಿಸರಸ್ವತಿಯಮ್ಮ. |
| ಪತಿ | : | ಕೆ.ಎಲ್. ಶ್ರೀನಿವಾಸ ಮೂರ್ತಿ. |
| ಮಕ್ಕಳು | : | ನಯನಾ ಕಶ್ಯಪ್, ಪಲ್ಲವಿರಾವ್. |

## ಪ್ರಕಟಿತ ಕೃತಿಗಳು:

### ಕಥಾಸಂಕಲನ

- ❖ ಮರ ಗಿಡ ಬಳ್ಳಿ (1979)
- ❖ ಅಂತರಂಗದ ಪುಟಗಳು (1984)
- ❖ ಗೋಲ (1986)
- ❖ ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು (1991)
- ❖ ಕ್ರೌಂಚಪಕ್ಷಿಗಳು (2005)

- ❖ ಅಲೆಗಳಲ್ಲಿ ಅಂತರಂಗ (2006)

  1979 ರಿಂದ 2004 ರವರೆಗಿನ ಕಥೆಗಳ ಸಂಗ್ರಹ.

**ಕವನ ಸಂಕಲನ.**

- ❖ ಬಿಂದು ಬಿಂದಿಗೆ (1990)
- ❖ ಪಾರಿಜಾತ (1999)

**ಕಾದಂಬರಿ.**

- ❖ ಅಸ್ಪೃಶ್ಯರು (1992)

**ಪ್ರಬಂಧ ಸಂಕಲನ**

- ❖ ಮಲ್ಲಿನಾಥನ ಧ್ಯಾನ (1996)

  ಲಂಕೇಶ್ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಸಂಗ್ರಹ.
- ❖ ಜಾತ್ರೆ (1998) – ಸ್ಮೃತಿ ಕಥನ.

**ನೆನಪುಗಳ ಸಂಗ್ರಹ:**

- ❖ ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು(1984)

  ಶ್ರೀ.ಕೋ.ಲ. ಕಾರಂತರ ಬದುಕಿನ ನೆನಪುಗಳ ಸಂಗ್ರಹ.
- ❖ ಸೇಡಿಯಾಪು ನೆನಪುಗಳು (1996)

  ಪಂಡಿತ ಸೇಡಿಯಾಪು ಕೃಷ್ಣಭಟ್ಟರ ನೆನಪುಗಳು ಸಂಗ್ರಹ.
- ❖ ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ (2003)

  ದಿ.ಬಿ.ವಿ ಕಾರಂತರ ಬದುಕಿನ ನೆನಪು ಅನುಭವಗಳ ಕಥನ.
- ❖ ಮುಂತಾದ ಕೆಲ ಪುಟಗಳು (2008)

ಲೇಖಕಿ ಶ್ರೀಮತಿ ಸರಸ್ವತಿ ಬಾಯಿ ರಾಜವಡೆಯವರ ಬದುಕಿನ ಕಥನ.

**ಮುಖ್ಯ ಪ್ರಶಸ್ತಿಗಳು:**

- ಗೀತಾ ದೇಸಾಯಿ ದತ್ತಿ ನಿಧಿ ಪ್ರಶಸ್ತಿ 'ಬಿಂದುಬಿಂದಿಗೆ' ಮತ್ತು 'ಅಂತರಂಗದ ಪುಟಗಳು'
- ವರ್ಧಮಾನ ಉದಯೋನ್ಮುಕ ಪ್ರಶಸ್ತಿ (ಗೋಲ) 1992
- ಕಥಾ ಪ್ರಶಸ್ತಿ – (ಹಗಲು ಗೀಚಿದರೆ ನೆಂಟ) 1994
- ಅನುಪಮಾ ಪ್ರಶಸ್ತಿ (ಸಮಾಜಶಾಸ್ತ್ರಜ್ಞೆಯ ಟಿಪ್ಪಣಿ) 1994
- ಎಂ.ಕೆ. ಇಂದಿರಾ ಪ್ರಶಸ್ತಿ (ಅಸ್ಪೃಶ್ಯರು) 1994
- ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಐದು ಮಕ್ಕಳ ನಾಟಕಗಳು) 1994
- ಕಥಾ ಪ್ರಶಸ್ತಿ (ಅಮ್ಮಚ್ಚಿಯೆಂಬ ನೆನಪು) 1997
- ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಮಲ್ಲಿನಾಥನ ಧ್ಯಾನ) 1997
- ಅತ್ತಿಮಬ್ಬೆ ಪ್ರಶಸ್ತಿ – 1988. (ಅತ್ತಿಮಬ್ಬೆ ಪ್ರತಿಸ್ಠಾನದಿಂದ)
- ಕರ್ನಾಟಕ ರಾಜ್ಯದ ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ – 1998
- ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2009 – 'ಕ್ರೌಂಚ ಪಕ್ಷಿಗಳು' ಕಥಾಸಂಕಲನಕ್ಕೆ

## ಪರಾಮರ್ಶನ ಗ್ರಂಥಗಳು/ಗ್ರಂಥ ಋಣ.


ಜಿ.ಎಸ್.ಆಮೂರ (2003) : ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ ಸ್ನೇಹಾ ಪ್ರಿಂಟರ್ಸ್. ಬೆಂಗಳೂರು.

ಡಾ. ಕರೀಗೌಡ ಬೀಚನಹಳ್ಳಿ (2003) : ಶತಮಾನದ ಸಣ್ಣಕಥೆಗಳ ಸಮೀಕ್ಷೆ ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು.

ಡಾ.ಕೆ. ಕೇಶವಮೂರ್ತಿ (ಸಂ) (2006) : ಸಾಹಿತ್ಯ ವಿಮರ್ಶೆ. ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು.

ಡಾ. ಹೆಚ್.ಎಸ್.ಶ್ರೀಮತಿ (ಸಂ) (2006) : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ. ಕನ್ನಡ ವಿಶ್ವವಿದ್ಯಾಲಯ ಹಂಪಿ.

ಡಾ.ಬಿ.ಎಸ್.ಸುಮಿತ್ರಾಬಾಯಿ (2006) : ಸ್ತ್ರೀವಾದ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು.

ಡಾ. ಎಂ.ಉಷಾ (2004) : ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಕನ್ನಡ ವಿಶ್ವವಿದ್ಯಾಲಯ,ಹಂಪಿ

ಡಾ. ಎಂ.ಉಷಾ (ಸಂ) (2007) : ಆಧುನಿಕ ಮಹಿಳಾ ಸಾಹಿತ್ಯ. ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ಗಿರಡ್ಡಿ ಗೋವಿಂದರಾಜು (1978) : ಸಣ್ಣಕಥೆಯ ಹೊಸ ಒಲವುಗಳು, ಸಾಹಿತ್ಯ ಭಂಡಾರ, ಹುಬ್ಬಳ್ಳಿ.

ಪ್ರೊ.ಎಸ್.ಎಲ್. ಶೇಷಗಿರಿರಾವ್ (1990) : ಭಾರತೀಯ ಸಾಹಿತ್ಯ ಸಮೀಕ್ಷೆ (ಸಂಪುಟ-2) ಕನ್ನಡಸಾಹಿತ್ಯ ಅಕಾಡೆಮಿ ಬೆಂಗಳೂರು.

ತ.ಸು. ಶಾಮರಾಯ (1993) : ಕನ್ನಡ ಭಾರತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ. ಬೆಂಗಳೂರು

ಮನುಚಕ್ರವರ್ತಿ ಎನ್. (1993) : ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ.

ಬಸವರಾಜ್ ಸಬರದ (1994) : ಸಾಹಿತ್ಯ ಸಂಗತಿ ಪಲ್ಲವಿ ಪ್ರಕಾಶನ ಗುಲ್ಬರ್ಗಾ.

ವೈದೇಹಿ (2006) : ಅಲೆಗಳಲ್ಲಿ ಅಂತರಂಗ 1979 ರಿಂದ 2004ರ ವರೆಗಿನ ಕಥೆಗಳ ಸಂಗ್ರಹ, ಅಕ್ಷರ ಪ್ರಕಾಶನ, ಹೆಗ್ಗೋಡು. ಸಾಗರ.

ಟಿ.ಪಿ. ಅಶೋಕ (ಸಂ) (2009) : ವೈದೇಹಿ ವಾಚಿಕೆ, ಪ್ರಕಾಶಕರು ನುಡಿ ಪುಸ್ತಕ ಬನಶಂಕರಿ 2ನೇ ಹಂತ ಬೆಂಗಳೂರು.

